| | | |
|---|---|---|
| 1195. | ಶ್ರೀ ಹೆಚ್.ಎಸ್. ಸಿದ್ಧಗಂಗಪ್ಪ ಬಿನ್ ಸಿದ್ಧಪ್ಪ, ಹೊಸಪೇಟೆ,<br>ಹೊಸೂರು ಅಂಚೆ, ಗೌರಿಬಿದನೂರು ತಾ:, ಚಿಕ್ಕಬಳ್ಳಾಪುರ ಜಿಲ್ಲೆ | ಜಾನಪದ |
| 1196. | ಶ್ರೀಮತಿ ನಾರಾಯಣಮ್ಮ ಕೋಂ ಬಾಲಕೃಷ್ಣರಾವ್,<br>ಮಂಚನಬೆಲೆ ಗ್ರಾಮ & ಅಂಚೆ, ಕಸಬಾ ಹೋಬಳಿ<br>ಚಿಕ್ಕಬಳ್ಳಾಪುರ ತಾ॥, ಚಿಕ್ಕಬಳ್ಳಾಪುರ ಜಿಲ್ಲೆ | ನಾಟಕ |
| 1197. | ಮುನಿಯಪ್ಪ ಬಿನ್ ಚಿಕ್ಕ ಮುನಿಶ್ಯಾಮಪ್ಪ<br>ದ್ಯಾವರಹಳ್ಳಿ ಚಿಕ್ಕಬಳ್ಳಾಪುರ ಜಿಲ್ಲೆ | ನಾಟಕ |
| 1198. | ಶ್ರೀ ಆಂಜಿನಪ್ಪ ಬಿನ್ ಶಿಡ್ಲಘಟ್ಟ ಆಂಜಿನಪ್ಪ<br>ಅಂಬೇಡ್ಕರ್ ಬಡಾವಣೆ, ಹೊಸೂರು, ತಾ: ಗೌರಿಬಿದನೂರು, ಜಿ: ಚಿಕ್ಕಬಳ್ಳಾಪುರ | ನಾಟಕ |
| 1199. | ಶ್ರೀ ಕೆ. ಶಂಕರಾಚಾರಿ ಬಿನ್ ಕಪಿನಾಚಾರಿ<br>ಯರ್ರಸೀಗೇನಹಳ್ಳಿ ವುಲ್ಲಪ್ಪನಹಳ್ಳಿ ಪೋಸ್ಟ್ ಅಂಬಾಜಿದುರ್ಗ ಹೋಬಳಿ<br>ತಾ: ಚಿಂತಾಮಣಿ, ಜಿ: ಚಿಕ್ಕಬಳ್ಳಾಪುರ | ನಾಟಕ |
| 1200. | ಶ್ರೀ ಸಂಜೀವರಾಯಪ್ಪ ಬಿನ್ ಬಸಪ್ಪ<br>ಬಾಲರೆಡ್ಡಿ ಹಳ್ಳಿ ಗ್ರಾಮ, ಜರಬಂಡಹಳ್ಳಿ ಅಂಚೆ,<br>ಮಂಚೇನಹಳ್ಳಿ ಹೋಬಳಿ ತಾ: ಗೌರಿಬಿದನೂರು, ಜಿ: ಚಿಕ್ಕಬಳ್ಳಾಪುರ | ನಾಟಕ |

**ಹೆಚ್.ವಿ. ರಾಮಚಂದ್ರರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

ಪಿ.ಆರ್. 181

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರದಿಂದ ಮಹಾನಗರ ಸಭೆಗೆ ಹಸ್ತಾಂತರಿಸಬೇಕಾದ ವಿನ್ಯಾಸಗಳ ಕುರಿತು.

**ಓದಲಾಗಿದೆ:** 1) ಆಯುಕ್ತರು, ಹುಬ್ಬಳ್ಳಿ- ಧಾರವಾಢ ನಗರಾಭಿವೃದ್ಧಿ ಪ್ರಾಧಿಕಾರ ಹುಬ್ಬಳ್ಳಿ ಇವರ ಪತ್ರ ಸಂಖ್ಯೆ: ಹುಧಾನಪ್ರಾಅವಿ/ 2010-11/2345 ದಿ: 16.9.2010

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಹುಬ್ಬಳ್ಳಿ- ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರ, ಹುಬ್ಬಳ್ಳಿ ಇವರು ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿನ 8 ವಿನ್ಯಾಸಗಳನ್ನು ಈಗಾಗಲೇ ಮಂಜೂರಾದ ಯೋಜನೆಯಲ್ಲಿಯ ಅವಕಾಶದಂತೆ ಅಭಿವೃದ್ಧಿಪಡಿಸಿದ್ದು, ಇವುಗಳನ್ನು ನಿರ್ವಹಣೆ ಮಾಡಲು ಪ್ರಾಧಿಕಾರದಲ್ಲಿ ಅವಶ್ಯಕ ಸಿಬ್ಬಂದಿ ಸಾಮಗ್ರಿಗಳು ಇಲ್ಲದ ಕಾರಣ ಪ್ರಾಧಿಕಾರಕ್ಕೆ ಅನಾವಶ್ಯಕ ಹೊರೆಯಾಗುತ್ತದೆ. ಅಲ್ಲದೆ ಈ ವಿನ್ಯಾಸಗಳಲ್ಲಿಯ ನಿವೇಶನದಾರರಿಂದ ಆಸ್ತಿಕರವನ್ನು ಬಹಳ ವರ್ಷಗಳಿಂದ ಮಹಾನಗರ ಸಭೆಯಿಂದ ಆಕರಿಸಲಾಗುತ್ತಿದೆ. ಕಾರಣ ಈ ಎಂಟು ವಿನ್ಯಾಸಗಳನ್ನು ಮಹಾನಗರ ಪಾಲಿಕೆ ಹುಬ್ಬಳ್ಳಿ-ಧಾರವಾಡ ಇವರಿಗೆ ಹಸ್ತಾಂತರಿಸಲು ಪ್ರಾಧಿಕಾರದ ಸಭೆ ದಿನಾಂಕ:28.08.2010ರಲ್ಲಿ ನಿರ್ಣಯ ಅಂಗೀಕರಿಸಿರುತ್ತದೆ. ಆದ್ದರಿಂದ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ ಉಪಬಂಧ-30ರನ್ವಯ ಮುಂದಿನ ನಿರ್ವಹಣೆಗಾಗಿ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ ಹಸ್ತಾಂತರಿಸಿ ಆದೇಶ ಹೊರಡಿಸುವಂತೆ ಸದರಿ ಪತ್ರದಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 225 ಬೆಮಪ್ರಾ/2010, ಬೆಂಗಳೂರು, ದಿನಾಂಕ: 29-12-2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ 1987ರ ಕಲಂ ಉಪಬಂಧ 30ರನ್ವಯ ಹುಬ್ಬಳ್ಳಿ-ಧಾರವಾಡ ನಗರಾಭಿವೃದ್ಧಿ ಪ್ರಾಧಿಕಾರ ವ್ಯಾಪ್ತಿಯಲ್ಲಿನ ಈ ಕೆಳಕಂಡ 8 ಪ್ರಸ್ತಾವಿತ ವಿನ್ಯಾಸಗಳನ್ನು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಗೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆ ನೀಡಿ ಆದೇಶಿಸಿದೆ.

1. ಕೃಷ್ಣಪೂರ ರಿ.ಸ.ನಂ 18/3 (1ಎಕರೆ 31 ಗುಂಟೆ)
2. ಅಮರೋಳ ರಿ.ಸ.ನಂ 33/1 (2ಎಕರೆ 7ಗುಂಟೆ)
3. ಉಣಕಲ್ಲ ರಿ.ಸ.ನಂ 628/2ಬ2(38 ಗುಂಟೆ)
4. ರಾಯನಾಳ ರಿ.ಸ.ನಂ.113/ಸಿ+ಬಿ (12 ಎಕರೆ)
5. ಎಂ.ಟಿ.ಎಸ್. ರಿ.ಸ.ನಂ.131/2 (1ಎಕರೆ 17 ಗುಂಟೆ)
6. ರಾಯನಾಳ ರಿ.ಸ.ನಂ 88(1 ಹಾಗೂ 2ನೇ ಹಂತ) (141 ಎಕರೆ + 24 ಎಕರೆ)
7. ಅಯೋಧ್ಯಾ ರಿ.ಸ.ನಂ. 167/1ಅ (3 ಎಕರೆ)
8. ದೊಡ್ಡನಾಯಕನಕೊಪ್ಪ ರಿ.ಸ.ನಂ 7ರಿಂದ 14 (44 ಎಕರೆ 24 ಗುಂಟೆ)

ಮೇಲ್ಕಂಡ ಬಡಾವಣೆಗಳಲ್ಲಿ ರಚಿಸಲಾಗಿರುವ ರಸ್ತೆಗಳನ್ನು ಸಾರ್ವಜನಿಕ ರಸ್ತೆಗಳೆಂದು ಘೋಷಿಸಲಾಗಿದೆ. ಮೇಲ್ಕಂಡ ಯೋಜನೆಗಳಲ್ಲಿ ರಚಿಸಲಾಗಿರುವ ಬಯಲು ಪ್ರದೇಶವನ್ನು ಉದ್ಯಾನವನ ಮತ್ತು ಆಟದ ಮೈದಾನಗಳನ್ನು ಒಳಗೊಂಡಿದ್ದು ಸದರಿ 8 ವಿನ್ಯಾಸಗಳನ್ನು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯು ಸ್ವಂತ ವೆಚ್ಚದಲ್ಲಿ ನಿರ್ವಹಿಸಲು ಹಸ್ತಾಂತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಂ. ಹಿರೇಮಠ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ

ಪಿ.ಆರ್ 494

## ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಗ್ರಾಅಪ 44 ಯೋಉಮಾ 2010, ಬೆಂಗಳೂರು, ದಿನಾಂಕ: 30.12.2010.**

**ವಿಷಯ : ಗ್ರಾಮ ಮಟ್ಟದಲ್ಲಿ ಸಾಮಾನ್ಯ ಮಾಹಿತಿ ದಾಖಲಾತಿ ವಹಿ ನಿರ್ವಹಿಸುವ ಬಗ್ಗೆ ಮಾರ್ಗಸೂಚಿ.**

ಸರ್ಕಾರವು ಅನುಷ್ಠಾನಗೊಳಿಸುತ್ತಿರುವ ಯಾವುದೇ ಯೋಜನೆ ಫಲಪ್ರದವಾಗಲು ಹಾಗೂ ತಳಮಟ್ಟದಿಂದ ರಾಜ್ಯಮಟ್ಟಕ್ಕೆ ಯೋಜನೆಗಳನ್ನು ರೂಪಿಸಲು ಜನವಸತಿವಾರು, ಗ್ರಾಮವಾರು ಸಾಮಾನ್ಯ ಮಾಹಿತಿ ಅತ್ಯಗತ್ಯವಾಗಿರುವುದು ತಮಗೆಲ್ಲರಿಗೂ ತಿಳಿದ ವಿಷಯವಾಗಿದೆ.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಯೋಜನಾ ಇಲಾಖೆ ಮತ್ತು ಆರ್ಥಿಕ ಮತ್ತು ಸಾಂಖ್ಯಿಕ ಇಲಾಖೆಯ ಸಹಭಾಗಿತ್ವದಲ್ಲಿ ಗ್ರಾಮ/ಜನವಸತಿವಾರು ಅಂಕಿ ಅಂಶಗಳ ಕ್ರೋಢೀಕರಣಕ್ಕೆ ನೆರವಾಗಲು ವಿವಿಧ ಇಲಾಖೆಗಳ ಸಾಮಾನ್ಯ ಮಾಹಿತಿ ಹಾಗೂ ಇಲಾಖೆಗಳು ಅನುಷ್ಠಾನಗೊಳಿಸುತ್ತಿರುವ ಯೋಜನೆಗಳ ಅವಶ್ಯ ಅಂಕಿ ಅಂಶಗಳನ್ನು ಒಳಗೊಂಡಂತೆ ದಾಖಲಾತಿ ವಹಿ ತಯಾರಿಸಿ, ಅದನ್ನು ಸಮರ್ಪಕವಾಗಿ ತುಂಬಲು ಅನುಕೂಲವಾಗುವಂತೆ ಮಾರ್ಗಸೂಚಿಯನ್ನು ಹೊರಡಿಸಲಾಗಿದೆ. ಸದರಿ ಮಾರ್ಗಸೂಚಿಯಂತೆ ಗ್ರಾಮಮಟ್ಟದಲ್ಲಿ ದಾಖಲಾತಿ ವಹಿಯನ್ನು ತಯಾರಿಸಲು ಹಾಗೂ ಪ್ರತಿ ವರ್ಷವೂ ಇಂದೀಕರಿಸಲು ಅಗತ್ಯ ಕ್ರಮ ವಹಿಸುವುದು.

ಸಾಮಾನ್ಯ ದಾಖಲಾತಿ ವಹಿಯಲ್ಲಿ ಇಲಾಖಾವಾರು ಮಾಹಿತಿ ಸಂಗ್ರಹಣೆ, ಪರಿಶೀಲನೆ, ಕ್ರೋಢೀಕರಣ, ದೃಢೀಕರಣ ಹಾಗೂ ಗಣಕೀಕರಣಕ್ಕೆ ಗುರುತಿಸಲಾದ ಅಧಿಕಾರಿ/ಅಧಿಕಾರೇತರರು ನಿಗದಿತ ಸಮಯದಲ್ಲಿ ಕ್ರಮ ಕೈಗೊಂಡು ಗ್ರಾಮ ಪಂಚಾಯತಿ ಮಟ್ಟದಲ್ಲಿ ದಾಖಲಾತಿ ವಹಿ ನಿರ್ವಹಿಸಲು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ನಿಮ್ಮ ಅಧೀನಾಧಿಕಾರಿಗಳಿಗೆ ಅಗತ್ಯ ಸೂಚನೆಗಳನ್ನು ನೀಡುವುದು. ಸಾಮಾನ್ಯ ದಾಖಲಾತಿ ವಹಿಯಲ್ಲಿನ ಅಂಶಗಳನ್ನು ತುಂಬಲು ನೀಡಿರುವ ಮಾರ್ಗಸೂಚಿಯನುಸಾರ ಕ್ರಮ ವಹಿಸುವುದು.

ಗ್ರಾಮ ಪಂಚಾಯತಿ ಮಟ್ಟದಲ್ಲಿ ಸಾಮಾನ್ಯ ದಾಖಲಾತಿ ವಹಿಯ ನಿರ್ವಹಣೆ ಹಾಗೂ ಇಂದೀಕರಣ ಕುರಿತು ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ನಡೆಯುವ ಕೆ.ಡಿ.ಪಿ ಸಭೆಯಲ್ಲಿ ಪರಿಶೀಲನೆ ಕೈಗೊಂಡು ಅನುಪಾಲನಾ ವರದಿಯನ್ನು ಇಲಾಖಾಧಿಕಾರಿಗಳು ಪಡೆಯಲು ಕ್ರಮವಹಿಸಲು ಸೂಚಿಸಿದೆ.

ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜನವಸತಿವಾರು ಗುಣಮಟ್ಟದ ಅಂಕಿ ಅಂಶಗಳನ್ನು ಪ್ರತಿ ವರ್ಷ ಸಂಗ್ರಹಿಸಿ ಗಣಕೀಕರಿಸುವ ಕಾರ್ಯವನ್ನು ಕಾಲಮಿತಿಯೊಳಗೆ ಕೈಗೊಳ್ಳಬೇಕು. ಜಿಲ್ಲಾ ತಾಲ್ಲೂಕು ಮತ್ತು ಗ್ರಾಮ ಪಂಚಾಯತಿಗಳು ತಮ್ಮ ಪಂಚವಾರ್ಷಿಕ, ವಾರ್ಷಿಕ ಯೋಜನೆಗಳನ್ನು ಈ ಅಂಕಿ–ಅಂಶಗಳ ಆಧಾರದ ಮೇಲೆ ತಯಾರಿಸುವಂತೆ ನೋಡಿಕೊಳ್ಳಲು ಸೂಚಿಸಿದೆ.

ಎಸ್.ವಿ.ರಂಗನಾಥ್
**ಸರ್ಕಾರದ ಮುಖ್ಯ ಕಾರ್ಯದರ್ಶಿಗಳು**

## ಸಾಮಾನ್ಯ ಮಾಹಿತಿ ಮಹತ್ವ ಮತ್ತು ಸಾರಾಂಶ

### ಸ್ಥಳೀಯ ಮಟ್ಟದ ಅಭಿವೃದ್ಧಿಗಾಗಿ ಮೂಲ ಅಂಕಿ ಅಂಶಗಳು

**ಪೀಠಿಕೆ :**

1.1 ಸಂವಿಧಾನದ 73 ಹಾಗೂ 74ನೇ ತಿದ್ದುಪಡಿಯ ಮೂಲಕ ಪಂಚಾಯಿತಿಗಳಿಗೆ ಹಾಗೂ ನಗರಪಾಲಿಕೆಗಳಿಗೆ ಹೆಚ್ಚಿನ ಅಧಿಕಾರ ಹಾಗೂ ಜವಾಬ್ದಾರಿಗಳನ್ನು ನೀಡುವ ಮತ್ತು ವಿವಿಧ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳಡಿ ಸ್ಥಳೀಯ ಯೋಜನೆ ತಯಾರಿಕೆ, ಪರಿಣಾಮಕಾರಿ ಅನುಷ್ಠಾನ ಮತ್ತು ಪರಿಶೀಲನೆ ಕೈಗೊಳ್ಳುವ ಅವಕಾಶಗಳನ್ನು ನೀಡಲಾಗಿದೆ. ಇದಕ್ಕಾಗಿ ಸ್ಥಳೀಯ ಮಟ್ಟದಲ್ಲಿ ಪ್ರಮುಖ ಸೂಚಿಗಳ ಅಂಕಿ–ಅಂಶಗಳು ಹಾಗೂ ಮಾಹಿತಿಯ ಅವಶ್ಯಕತೆಯಿದೆ. 2001ರಲ್ಲಿ ಡಾ : ಸಿ.ರಂಗರಾಜನ್ ಅವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಸಾಂಖ್ಯಿಕ ಆಯೋಗವು ಅತಿ ಸೂಕ್ಷ್ಮ ಮಟ್ಟದ ಯೋಜನೆಗಳಿಗಾಗಿ ಸ್ಥಳೀಯ ಮಟ್ಟದಲ್ಲಿ ಪ್ರಮುಖ ಅಂಶಗಳಲ್ಲಿ ನಿಯಮಿತವಾಗಿ ಅಂಕಿ–ಅಂಶಗಳನ್ನು ಸಂಗ್ರಹಿಸುವ ಪದ್ಧತಿಯನ್ನು ಅಭಿವೃದ್ಧಿಪಡಿಸಲು ಶಿಫಾರಸ್ಸು ಮಾಡಿದೆ. ರಾಜ್ಯ ಸರ್ಕಾರವೂ ಸಹ ಈ ನಿಟ್ಟಿನಲ್ಲಿ ಸಾಮಾನ್ಯ ಮಾಹಿತಿಯಡಿ 2003–04ನೇ ಸಾಲಿನಿಂದಲೂ 350ಕ್ಕೂ ಹೆಚ್ಚು ಅಂಶಗಳಿಗೆ ಜನವಸತಿವಾರು ಮಾಹಿತಿಯನ್ನು ಸಂಗ್ರಹಿಸಿ ಗ್ರಾಮ ಪಂಚಾಯತಿ ಮಟ್ಟದಲ್ಲಿ ಸಾಮಾನ್ಯ ಮಾಹಿತಿ ಪುಸ್ತಕದಲ್ಲಿ ಸಾರ್ವಜನಿಕರಿಗೆ ಮತ್ತು ಪಂಚಾಯತ್ ರಾಜ್ ಸದಸ್ಯರಿಗೆ ಒದಗಿಸಲಾಗುತ್ತಿದೆ.

1.2 ಕೇಂದ್ರ ಸಾಂಖ್ಯಿಕ ಸಂಸ್ಥೆಯು 2002ರಲ್ಲಿ ಯೋಜನಾ ಆಯೋಗದ ಒಬ್ಬ ಸದಸ್ಯರನ್ನು ಅಧ್ಯಕ್ಷರನ್ನಾಗಿ ಮಾಡಿ ಸ್ಥಳೀಯ ಮಟ್ಟದ ಅಭಿವೃದ್ಧಿಗಾಗಿ ಮೂಲ ಅಂಕಿ–ಅಂಶಗಳ ವಿಷಯದಲ್ಲಿ ಉನ್ನತ ಮಟ್ಟದ ತಜ್ಞರ ಸಮಿತಿಯೊಂದನ್ನು ರಚಿಸಿದ್ದು, ಈ ಕೆಳಕಂಡ ಶಿಫಾರಸ್ಸುಗಳನ್ನು ಮಾಡಿದೆ.

(i) ಗ್ರಾಮ ಪಂಚಾಯಿತಿಯ ಗ್ರಾಮ ಮಟ್ಟದ ಅಂಕಿ ಅಂಶಗಳ ಕ್ರೋಢೀಕರಣ ಮತ್ತು ನಿರ್ವಹಣೆಯನ್ನು ಮಾಡಬೇಕು, ಅವುಗಳನ್ನು ಸ್ವಂತದ್ದಾಗಿ ಇಟ್ಟುಕೊಳ್ಳಬೇಕು.

(ii) ಗ್ರಾಮ ನಮೂನೆಯನ್ನು ಉಪಯೋಗಿಸಿ ಒಂದೇ ತರಹದ ಗ್ರಾಮ ಮಟ್ಟದ ಮಾಹಿತಿಯನ್ನು ಸಂಗ್ರಹಿಸಬಹುದು. ಕೆಳಕಂಡ ವಿಷಯಗಳಲ್ಲಿ ಮಾಹಿತಿಯನ್ನು ಸಂಗ್ರಹಿಸಬಹುದು.

ಅ) ಗ್ರಾಮದಲ್ಲಿ ಲಭ್ಯವಿರುವ ಮೂಲಭೂತ ಸೌಕರ್ಯಗಳ ಲಭ್ಯತೆ

ಆ) ಗ್ರಾಮದಲ್ಲಿ ಲಭ್ಯವಿರುವ ಆಸ್ತಿಗಳು. ಉದಾ: ಕಾರ್ಖಾನೆಗಳ ಸಂಖ್ಯೆ, ವ್ಯಾಪಾರ ಉದ್ದಿಮೆಗಳು, ಸೇತುವೆಗಳು, ಘೋಷಿತ ಅರಣ್ಯ ಪ್ರದೇಶ, ಹಣ್ಣಿನ ತೋಟಗಳು, ರಸ್ತೆಗಳು, ಇತ್ಯಾದಿ.

ಇ) ಸಮೀಪದಲ್ಲಿರುವ ಸೌಲಭ್ಯಗಳಿಗೆ ಗ್ರಾಮದಿಂದಿರುವ ದೂರ

ಈ) ಗ್ರಾಮಸ್ಥರ ಜನಸಂಖ್ಯಾ ಸ್ಥಿತಿ, ಜನನ, ಮರಣ, ರೋಗಗಳು (ರೋಗಸ್ಥರು) ವಲಸೆ, ಮದುವೆ, ಇತ್ಯಾದಿಗಳನ್ನೊಳಗೊಂಡಂತೆ

ಉ) ಗ್ರಾಮಸ್ಥರ ಶೈಕ್ಷಣಿಕ ಸ್ಥಿತಿ

ಊ) ಪಶು ಸಂಪತ್ತು ಮತ್ತು ಕೋಳಿಗಳು

ಋ) ಮಾರುಕಟ್ಟೆಗಳು

ಎ) ಗ್ರಾಮಸ್ಥರ ಉದ್ಯೋಗ ಸ್ಥಿತಿಗತಿ

(iii) ಒಂದು ವರ್ಷದಲ್ಲಿ ಒಮ್ಮೆ ಸಂಗ್ರಹಿಸಬಹುದಾದ ಅವಧಿಯ ಅಂಕಿ–ಅಂಶ ಗಳಿರುವವು(ಏಪ್ರಿಲ್ ತಿಂಗಳಿನಲ್ಲಿ) ಜನಸಂಖ್ಯೆಯ ಅಂಕಿ–ಅಂಶಗಳು (ವಯೋಗುಂಪು ಹಾಗೂ ಸಾಮಾಜಿಕ ಗುಂಪುವಾರು), ಒಟ್ಟು ಕುಟುಂಬಗಳ ಸಂಖ್ಯೆ, ಮಹಿಳಾ ಯಜಮಾನಿಕೆಯ ಕುಟುಂಬಗಳ ಸಂಖ್ಯೆ, ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳ ಸಂಖ್ಯೆ, ರೋಗಗ್ರಸ್ಥರು ಮತ್ತು ವಿಕಲಚೇತನರ ಅಂಕಿ ಅಂಶಗಳು, ಸಾಕ್ಷರತೆಯನ್ನು ಹೊಂದಿರುವವರ ಸಂಖ್ಯೆ, ದಾಖಲಾತಿ ಮತ್ತು ಶಾಲೆ ಬಿಟ್ಟವರ ಅಂಕಿ–ಅಂಶಗಳು, ಗ್ರಾಮದಲ್ಲಿ ಭೂಉಪಯೋಗ, ಮಾರುಕಟ್ಟೆಗಳ ಸಂಖ್ಯೆ, ಇತ್ಯಾದಿಗಳು ಇದರಲ್ಲಿ ಒಳಗೊಂಡಿರುತ್ತವೆ.

(iv) ಕೆಲವು ಅಂಕಿ–ಅಂಶಗಳು ಬದಲಾವಣೆ ಹೊಂದುವ ಗುಣಸ್ವಭಾವಗಳದ್ದಾಗಿದ್ದು, ವರ್ಷದಲ್ಲಿ ಪ್ರತಿ ತಿಂಗಳು ಸಂಗ್ರಹಿಸಬೇಕಾಗಬಹುದು. ಸಜೀವ ಜನನಗಳು, ನಿರ್ಜೀವ ಮರಣಗಳು ಮತ್ತು ಮರಣಗಳ ಸಂಖ್ಯೆ, ಮಹಿಳೆಯರ ಮರಣಗಳ ಸಂಖ್ಯೆ, ಗರ್ಭಿಣಿ ಮಹಿಳೆಯರ ಸಂಖ್ಯೆ, ವಲಸೆಯ ಅಂಕಿ–ಅಂಶಗಳು, ಹೊರ ಮತ್ತು ಒಳರೋಗಿಗಳ ಒಟ್ಟು ಸಂಖ್ಯೆ ಮತ್ತು ಅವರ ವಿವರಗಳು, ಬೀದಿ ಮಕ್ಕಳ ಸಂಖ್ಯೆ, ಲೈಂಗಿಕ ಕೆಲಸಗಾರರ ಸಂಖ್ಯೆ, ಮಹಿಳೆ ದೌರ್ಜನ್ಯಕ್ಕೊಳಗಾದ ಘಟನೆಗಳು, ಸಣ್ಣ ಪ್ರಮಾಣದ ಕೈಗಾರಿಕೆಗಳ ಸಂಖ್ಯೆ ಮತ್ತು ಕಾರ್ಮಿಕರು, ಇತ್ಯಾದಿಗಳು ಇದರಲ್ಲಿ ಒಳಗೊಂಡಿವೆ.

(v) ನಿಯಮಿತವಾಗಿ ಅಂಕಿ–ಅಂಶಗಳ ಹರಿವಿಗಾಗಿ ಗ್ರಾಮ ಮಟ್ಟದ ಅಂಕಿ–ಅಂಶಗಳನ್ನು ಸಂಗ್ರಹಿಸುವ ಮೂಲಕ ಗ್ರಾಮ ಮಟ್ಟದ ರಿಜಿಸ್ಟರುಗಳನ್ನು ಅಭಿವೃದ್ಧಿಪಡಿಸಬೇಕು ಮತ್ತು ನಿರ್ವಹಿಸಬೇಕು. ಗ್ರಾಮ ಪಂಚಾಯತಿಗಳು ತಮ್ಮ ಮಟ್ಟದಲ್ಲಿ ಸಮರ್ಪಕ ರಿಜಿಸ್ಟರುಗಳನ್ನು ನಿರ್ವಹಿಸುವ ಮೂಲ ಜವಾಬ್ದಾರಿಯನ್ನು ತೆಗೆದುಕೊಳ್ಳಬೇಕು.

1.3 ಉನ್ನತ ಮಟ್ಟದ ಅಧಿಕಾರಯುಕ್ತ ಸಮಿತಿಯ ಶಿಫಾರಸ್ಸುಗಳ ಅನುಗುಣವಾಗಿ ಅಂಕಿ–ಅಂಶಗಳ ಸಂಗ್ರಹಣೆಗಾಗಿ ಗ್ರಾಮ ಮಟ್ಟದ ನಮೂನೆಗಳು ಮತ್ತು ಮಾರ್ಗಸೂಚಿ ಕೈಪಿಡಿಗಳ ಆಧಾರದ ಮೇಲೆ ಮಾಹಿತಿಯನ್ನು ಕರ್ನಾಟಕದ 3 ಜಿಲ್ಲೆಗಳಲ್ಲಿ 2008–09ನೇ ಸಾಲಿಗೆ ಪ್ರಾಯೋಗಿಕವಾಗಿ ಸಂಗ್ರಹಿಸಲಾಗಿದೆ.

1.4 ಕರ್ನಾಟಕ ರಾಜ್ಯ ಕಾರ್ಯತಾಂತ್ರಿಕ ಯೋಜನೆಯಡಿ(ಏಖಖಖಕ) ಈ ವಿಷಯದ ಬಗ್ಗೆ ಚರ್ಚಿಸಲಾಗಿದ್ದು, ಈಗಿರುವ ಸಾಮಾನ್ಯ ಮಾಹಿತಿ ಹಾಗೂ ಸ್ಥಳೀಯ ಮಟ್ಟದ ಅಭಿವೃದ್ಧಿಗಾಗಿ ಮೂಲ ಅಂಕಿ ಅಂಶಗಳು ಇವುಗಳಡಿ ಸಂಗ್ರಹಿಸುವ ಮಾಹಿತಿ ಬಗ್ಗೆ ವಿಶ್ಲೇಷಣೆ ಮಾಡಿ ಸ್ಥಳೀಯ ಮಟ್ಟದ ಯೋಜನೆಗಳಿಗೆ ಬೇಕಾಗುವ ಹಾಗೂ ಸಾರ್ವಜನಿಕರಿಗೆ ಒದಗಿಸಬೇಕಾಗುವ ಅಂಕಿ ಅಂಶಗಳನ್ನು ನಿರ್ಧರಿಸಿ ಅಂತಹ ಅಂಕಿ ಅಂಶಗಳನ್ನು ಸಂಗ್ರಹಿಸಲು ಪ್ರಸ್ತಾವಿಸಲಾಗಿದೆ.

1.5 ಸರ್ಕಾರದ ಕಾರ್ಯದರ್ಶಿಗಳು, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ, ಇವರು ಈ ವಿಷಯವನ್ನು ಚರ್ಚಿಸಿ ಈ ಕೆಳಗಿನ ಸಮಿತಿಯನ್ನು ರಚಿಸಿ ಸಂಗ್ರಹಿಸಬೇಕಾದ ಅಂಕಿ ಅಂಶಗಳು, ಅವಧಿ, ಸಂಗ್ರಹಿಸಬೇಕಾದ ಅಧಿಕಾರಿಗಳು/ಸಿಬ್ಬಂದಿ, ತಾಲ್ಲೂಕು ಹಾಗೂ ಜಿಲ್ಲಾ ಮಟ್ಟದಲ್ಲಿ ಅಂಕಿ ಅಂಶಗಳ ಸಂಗ್ರಹಣೆ ಉಸ್ತುವಾರಿ, ಇತ್ಯಾದಿಗಳ ಬಗ್ಗೆ ಕೂಲಂಕಷವಾಗಿ ಅಧ್ಯಯನ ಮಾಡಿ ಮಾರ್ಗಸೂಚಿಯನ್ನು ಹೊರತರಲು ಸೂಚಿಸಿದ್ದರು.

1. ಶ್ರೀ ಹೆಚ್.ಇ.ರಾಜಶೇಖರಪ್ಪ, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ – ಅಧ್ಯಕ್ಷರು
2. ಶ್ರೀ ಕೆ.ವಿ.ರಘುರಾಮರೆಡ್ಡಿ, ನಿರ್ದೇಶಕರು, ಜಿಲ್ಲಾ ಯೋಜನಾ ವಿಭಾಗ, ಯೋಜನಾ ಇಲಾಖೆ – ಸದಸ್ಯರು
3. ಶ್ರೀ ಕೆ.ವಿ.ಸುಬ್ರಮಣ್ಯಂ, ಜಂಟಿ ನಿರ್ದೇಶಕರು, ಕೃಷಿ ಅಂಕಿ–ಅಂಶ ವಿಭಾಗ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ – ಸದಸ್ಯರು
4. ಶ್ರೀ ಬಿ.ಎಸ್. ಹಿರೇಮಠ, ಜಂಟಿ ನಿರ್ದೇಶಕರು, ರಾಜ್ಯಾದಾಯ ಮತ್ತು ಬೆಲೆಗಳು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ – ಸದಸ್ಯರು
5. ಶ್ರೀ ಶ್ರೀನಿವಾಸ ಹೆಚ್ ಮಾರಂಗಪ್ಪನವರ, ವಿಶೇಷಾಧಿಕಾರಿ, ಗಣಕ ಕೋಶ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ – ಸದಸ್ಯರು
6. ಶ್ರೀ ಎಸ್.ನಂಜುಂಡರಾವ್, ನಿರ್ದೇಶಕರು, ಯೋಜನಾ ಉಸ್ತುವಾರಿ ಮತ್ತು ಮಾಹಿತಿ ವಿಭಾಗ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ – ಸದಸ್ಯ ಕಾರ್ಯದರ್ಶಿ

1.6 ಸದರಿ ಸಮಿತಿಯು ಸಂಬಂಧಪಟ್ಟ ಇಲಾಖೆಗಳ ಅಧಿಕಾರಿಗಳೊಂದಿಗೆ ಚರ್ಚಿಸಿ ಸಂಗ್ರಹಿಸಬೇಕಾದ ಅಂಕಿ ಅಂಶಗಳ ಕುರಿತು ಮಾಹಿತಿಯನ್ನು ಪಡೆಯಿತು. ನಂತರ ಸಮಿತಿಯ ಸದಸ್ಯರು ಅಧ್ಯಕ್ಷರ ಅನುಮತಿಯೊಂದಿಗೆ ಚಾಮರಾಜನಗರ ಹಾಗೂ ತುಮಕೂರು ಜಿಲ್ಲಾ ಪಂಚಾಯತಿಗಳಿಗೆ ಭೇಟಿ ನೀಡಿ ಅಲ್ಲಿನ ಜಿಲ್ಲಾ ಮಟ್ಟದ ಅಧಿಕಾರಿಗಳೊಂದಿಗೆ ಈ ಮಾಹಿತಿ ಸಂಗ್ರಹಣೆ ಕುರಿತು ಚರ್ಚಿಸಲಾಯಿತು. ಸದರಿ ಸಭೆಗಳಲ್ಲಿ ಅನೇಕ ಸಲಹೆಗಳು ಬಂದವು. ಸದರಿ ಸಭೆಗಳಲ್ಲಿ ಮಾಹಿತಿಗಳನ್ನು ಸಮಿತಿಯು ಪುರಸ್ಕರಿಸಿ, ಅವುಗಳನ್ನು ಸಾಮಾನ್ಯ ಮಾಹಿತಿಯಡಿ ಅಳವಡಿಸಲಾಗಿದೆ. ನಂತರ ಪ್ರತಿಯೊಂದು ಅಂಶಗಳಿಗೆ ಅವುಗಳ ವ್ಯಾಖ್ಯೆ, ವ್ಯಾಪ್ತಿ ಹಾಗೂ ಸಂಗ್ರಹಿಸಬೇಕಾದ ಮತ್ತು ಉಸ್ತುವಾರಿ ಮಾಡಬೇಕಾದವರ ವಿವರಗಳನ್ನು ತೀರ್ಮಾನಿಸಲಾಯಿತು. ಸಂಗ್ರಹಣಾಕಾರರಿಗೆ ಮತ್ತು ಉಸ್ತುವಾರಿ ಅಧಿಕಾರಿಗಳಿಗೆ ಅನುಕೂಲವಾಗುವಂತೆ ಮಾರ್ಗಸೂಚಿಯನ್ನು ತಯಾರಿಸಲಾಯಿತು.

**ನಿರೀಕ್ಷಿತ ಫಲಿತಾಂಶ ಮತ್ತು ಫಲಶೃತಿ**

1.7 ಫಲಿತಾಂಶ : ರಾಜ್ಯದ ಎಲ್ಲ ಜನವಸತಿಗಳ ಗುಣಮಟ್ಟದ ಅಂಕಿ–ಅಂಶಗಳು ಪುಸ್ತಕ ರೂಪದಲ್ಲಿ ಮತ್ತು ಗಣಕ ರೂಪದಲ್ಲಿ (Soft Copy) ಲಭ್ಯವಾಗುವವು. ಜನವಸತಿಗಳ ಮೂಲ ಸೌಕರ್ಯಗಳ ಮಾಹಿತಿ ಸುಲಭವಾಗಿ ಲಭ್ಯವಾಗುವುದು. ಆದರೆ ಜನಸಂಖ್ಯೆ, ಕ್ಷೇತ್ರ, ಇತ್ಯಾದಿ ವಿಷಯಗಳ ಅಂಕಿ ಅಂಶಗಳು ಗ್ರಾಮ ಮಟ್ಟಕ್ಕೆ ಲಭ್ಯವಾಗುವವು.

1.8 ಫಲಶೃತಿ : ಪಂಚಾಯತ್ ರಾಜ್ ಸಂಸ್ಥೆಗಳಾದಂತಹ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಹಾಗೂ ಗ್ರಾಮ ಪಂಚಾಯತಿಗಳು ಗ್ರಾಮ ಮಟ್ಟದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿವಿಧ ಕಾರ್ಯಕ್ರಮಗಳ ಯೋಜನೆ ತಯಾರಿಕೆ ಮತ್ತು ಅನುಷ್ಠಾನಕ್ಕಾಗಿ ಈ ಅಂಕಿ–ಅಂಶಗಳನ್ನು ಉಪಯೋಗಿಸಬಹುದಾಗಿದೆ. ತಳಹಂತದ ಯೋಜನೆಗಳನ್ನು ತಯಾರಿಸಲು ಈ ಮಾಹಿತಿಗಳು ಹೆಚ್ಚು ಅನುಕೂಲವಾಗಲಿವೆ.

**ಸಂಗ್ರಹಿಸಬೇಕಾದ ಮಾಹಿತಿ**

1.9 ಮಾಹಿತಿಯನ್ನು ಎರಡು ರೀತಿಯಲ್ಲಿ ಸಂಗ್ರಹಿಸಬೇಕಾಗುತ್ತದೆ. (1) ಮುಖ್ಯ ಮಾಹಿತಿ ಹಾಗೂ (2) ವಲಯವಾರು ಮಾಹಿತಿ.

1.10 ಮುಖ್ಯ ಮಾಹಿತಿಯು ಜನವಸತಿ, ಗ್ರಾಮ, ಗ್ರಾಮ ಪಂಚಾಯತಿ, ಹೋಬಳಿ, ತಾಲ್ಲೂಕು ಹಾಗೂ ಜಿಲ್ಲೆಗಳನ್ನು ಒಳಗೊಂಡಿವೆ. ಜನವಸತಿಯು ಯಾವ ಗ್ರಾಮ, ಗ್ರಾಮ ಪಂಚಾಯತಿ, ಹೋಬಳಿ, ತಾಲ್ಲೂಕು ಹಾಗೂ ಜಿಲ್ಲೆಗೆ ಸಂಬಂಧಪಟ್ಟಿದೆ ಎಂಬುದನ್ನು ತಂತ್ರಾಂಶದ ಮೂಲಕ ಲಿಂಕನ್ನು ಕೊಡಬೇಕಾಗುತ್ತದೆ. ಇವುಗಳಿಗೆ 2011ರ ಜನಗಣತಿಯ ಸಂಕೇತ ಸಂಖ್ಯೆಗಳನ್ನು ನೀಡಬೇಕಾಗುತ್ತದೆ. ಇದಲ್ಲದೆ ಜನವಸತಿ/ಗ್ರಾಮ ಯಾವ ಗ್ರಾಮ ಪಂಚಾಯತಿ ಸದಸ್ಯ ಕ್ಷೇತ್ರ ತಾಲ್ಲೂಕು ಪಂಚಾಯತಿ ಸದಸ್ಯ ಕ್ಷೇತ್ರ, ಜಿಲ್ಲಾ ಪಂಚಾಯತಿ ಸದಸ್ಯ ಕ್ಷೇತ್ರ, ವಿಧಾನಸಭಾ ಕ್ಷೇತ್ರ ಹಾಗೂ ಲೋಕಸಭಾ ಕ್ಷೇತ್ರಕ್ಕೆ ಸಂಬಂಧಪಟ್ಟಿದೆಯೆಂದು ತಂತ್ರಾಂಶದಲ್ಲಿ ಲಿಂಕ್ ಕೊಡಬೇಕಾಗುತ್ತದೆ. ಗ್ರಾಮ ಪಂಚಾಯತಿಯಲ್ಲಿ ಪುಸ್ತಕದ ರೂಪದಲ್ಲಿ ಹೊರತರುವ ಅಂಕಿ ಅಂಶಗಳ ಮೊದಲ ಪುಟದಲ್ಲಿ ಈ ಮಾಹಿತಿಯನ್ನು ದಾಖಲಿಸಬೇಕಾಗಿದೆ.

1.11 ವಲಯವಾರು ಮಾಹಿತಿಯು 21 ಬ್ಲಾಕುಗಳನ್ನು ಹೊಂದಿದ್ದು 21 ವಲಯಗಳಲ್ಲಿ ಒಟ್ಟು 546 ಅಂಶಗಳಿಗೆ ಮಾಹಿತಿಯನ್ನು ಸಂಗ್ರಹಿಸಬೇಕಾಗುತ್ತದೆ. ಮೊದಲ ಬ್ಲಾಕ್‌ನಿಂದ ಕೊನೆಯ ಬ್ಲಾಕ್‌ನವರೆಗೆ ಈ ಕ್ರಮ ಸಂಖ್ಯೆಗಳನ್ನು ಅನುಕ್ರಮಾಂಕದಲ್ಲಿ ಕೊಡಲಾಗಿದೆ. ಪ್ರತಿಯೊಂದು ಬ್ಲಾಕಿನ ನಂತರ ಆ ಬ್ಲಾಕಿನ ಅಂಶಗಳ ಕ್ರಮ ಸಂಖ್ಯೆಗಳು ಈ ಅಂಶಗಳಿಗೆ ಸಂಗ್ರಹಿಸಬೇಕಾದ ಅಂಕಿ ಅಂಶಗಳ ಉಲ್ಲೇಖಿತ ಅವಧಿ, ಮಾಹಿತಿ ಸಂಗ್ರಹಣೆ ಮಾಡುವವರು, ಡಾಟಾ ಎಂಟ್ರಿ ಮಾಡುವವರು, ಇವುಗಳ ಉಸ್ತುವಾರಿ, ಜಿಲ್ಲಾ ಮಟ್ಟದಲ್ಲಿ ಉಸ್ತುವಾರಿಯ ಜವಾಬ್ದಾರಿ, ಮಾಹಿತಿಯ ಸಂಗ್ರಹಣೆಯ ಕೊನೆಯ ದಿನಾಂಕ, ಡಾಟಾ ಎಂಟ್ರಿಯ ಕೊನೆಯ ದಿನಾಂಕ ಹಾಗೂ ಅಂಕಿ ಅಂಶಗಳ ದೃಢೀಕರಣದ ಕೊನೆಯ ದಿನಾಂಕದ ವಿವರಗಳನ್ನು ಕೊಡಲಾಗಿದೆ. ಸದರಿ ಕೋಷ್ಠಕದಲ್ಲಿ ತಿಳಿಸಿದ ಅಧಿಕಾರಿಗಳು ಪ್ರತಿ ವರ್ಷವೂ ನಿಗದಿಪಡಿಸಿದ ದಿನಾಂಕದೊಳಗಾಗಿ ಈ ಎಲ್ಲ ಪ್ರಕಾರ್ಯಗಳನ್ನು ಪೂರೈಸಬೇಕು. ಸದರಿ ಕೋಷ್ಠಕದಲ್ಲಿ ನಮೂದಿಸಿದ ಸಂಬಂಧಪಟ್ಟ ಇಲಾಖೆಯ ಅಧಿಕಾರಿಗಳು ಕಾಲಮಿತಿಗೆ ಒಳಪಟ್ಟು ಎಲ್ಲ ಕೆಲಸಗಳನ್ನು ಪೂರೈಸುವ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಜಿಲ್ಲಾ ಪಂಚಾಯತಿ ಮಟ್ಟದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಜೂನ್ ಅಂತ್ಯದೊಳಗಾಗಿ ಹಿಂದಿನ ವರ್ಷದ ಮಾಹಿತಿಯು ಪುಸ್ತಕ ರೂಪದಲ್ಲಿ ಗ್ರಾಮ ಪಂಚಾಯತಿಯಲ್ಲಿ ಹಾಗೂ ಪಂಚತಂತ್ರ ತಂತ್ರಾಂಶದ ಮೂಲಕ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವೆಬ್‌ಸೈಟ್ ಹಾಗೂ ಜಿಲ್ಲಾ ಪಂಚಾಯತಿಯ ವೆಬ್‌ಸೈಟಿನಲ್ಲಿ ಲಭ್ಯವಾಗುವಂತೆ ನೋಡಿಕೊಳ್ಳುವ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಅವರಿಗೆ ಸಹಾಯಕರಾಗಿ ಮುಖ್ಯ ಯೋಜನಾಧಿಕಾರಿಗಳು ಈ ಕೆಲಸವನ್ನು ನಿರ್ವಹಿಸುವರು.

1.12 ಹೆಚ್ಚಿನ ಅಂಶಗಳಿಗೆ ಉಲ್ಲೇಖಿತ ಅವಧಿಯು ಏಪ್ರಿಲ್–ಮಾರ್ಚ್ ಆಗಿರುತ್ತದೆ. ಕೆಲವು ಅಂಶಗಳಿಗೆ ಜುಲೈ–ಜೂನ್ ಆಗಿರುತ್ತದೆ. ಜುಲೈ–ಜೂನ್ ಉಲ್ಲೇಖಿತ ಅವಧಿಯ ಮಾಹಿತಿಯನ್ನು ಜುಲೈ ಹಾಗೂ ಆಗಸ್ಟ್ ತಿಂಗಳುಗಳಲ್ಲಿ ಸಂಗ್ರಹಿಸಿ ಡಾಟಾ ಎಂಟ್ರಿ ಮಾಡಿ ವೆಬ್‌ಸೈಟಿಗೆ ಅಳವಡಿಸುವ ಕ್ರಮವನ್ನು ಕೈಗೊಳ್ಳಬೇಕು. ಏಪ್ರಿಲ್–ಮಾರ್ಚ್ ಅವಧಿಯ ಮಾಹಿತಿಯನ್ನು ಮೇಲಿನ ಕಂಡಿಕೆಯಲ್ಲಿ ತಿಳಿಸಿದಂತೆ ವೆಬ್‌ಸೈಟಿಗೆ ಅಳವಡಿಸಬೇಕು.

1.13 ಗ್ರಾಮ ಪಂಚಾಯತಿಗಳು ಕಾರ್ಯದರ್ಶಿಗಳ ಮೂಲಕ ಜನವಸತಿಯ/ಗ್ರಾಮದ ಹೆಚ್ಚಿನ ಅಂಶಗಳ ಮಾಹಿತಿಯನ್ನು ಸಂಗ್ರಹಿಸಬೇಕಾಗುತ್ತದೆ. ಕೆಲವು ಅಂಶಗಳಿಗೆ ಮಾಹಿತಿಯನ್ನು ಗ್ರಾಮ ಪಂಚಾಯತಿಯ ದಾಖಲೆಯಿಂದ ಪಡೆಯಬಹುದು. ಕೆಲವು ಮಾಹಿತಿಯನ್ನು ಜನವಸತಿಯಲ್ಲಿ ಪರಿಶೀಲಿಸಿ ಸಂಗ್ರಹಿಸಬೇಕಾಗುತ್ತದೆ. ಇದಕ್ಕಾಗಿ ಬಿಲ್ ಕಲೆಕ್ಟರ್, ವಾಟರ್ ಮೆನ್, ಲೈಟ್ ಮೆನ್, ಇತ್ಯಾದಿ ಗ್ರಾಮ ಪಂಚಾಯತಿ ನೌಕರರ ಮೂಲಕ ಮಾಹಿತಿಯನ್ನು ಸಂಗ್ರಹಿಸಬಹುದಾಗಿದೆ.

1.14 ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಪ್ರಕಾರ ಗ್ರಾಮ ಪಂಚಾಯತಿಯ ಉದ್ದಿಮೆಗಳಿಗೆ ಲೈಸೆನ್ಸ್ ನೀಡುವ ಅಧಿಕಾರವನ್ನು ಹೊಂದಿದೆ. ಎಲ್ಲ ಉದ್ದಿಮೆಗಳು ಗ್ರಾಮ ಪಂಚಾಯತಿಯಿಂದ ಲೈಸೆನ್ಸ್ ಪಡೆದು ಪ್ರತಿ ವರ್ಷ ಪುನರ್ ನವೀಕರಣ ಮಾಡಿಸಿಕೊಳ್ಳಬೇಕಾಗುತ್ತದೆ. ಮೇಲಿನ ಮಾಹಿತಿಯು ಗ್ರಾಮ ಪಂಚಾಯತಿಗೆ ಯಾವ ಯಾವ ಉದ್ದಿಮೆಗಳು ತನ್ನ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿವೆ ಹಾಗೂ ಎಷ್ಟು ಉದ್ದಿಮೆಗಳು ಲೈಸೆನ್ಸ್ ಹೊಂದಿವೆ ಅಲ್ಲದೆ ನವೀಕರಣಗೊಳಿಸುತ್ತಿವೆ ಎಂಬುದನ್ನು ತಿಳಿಯಲು ಸಾಧ್ಯವಾಗುತ್ತದೆ. ಅಲ್ಲದೆ ಎಲ್ಲ ಉದ್ದಿಮೆಗಳನ್ನು ಲೈಸೆನ್ಸ್ ಹೊಂದುವಂತೆ ಮಾಡಿ ಲೈಸೆನ್ಸ್ ಫೀ ಸಂಗ್ರಹಣೆಗೆ ದಾರಿ ಮಾಡಿಕೊಡುತ್ತದೆ. ಇದರಿಂದ ಗ್ರಾಮ ಪಂಚಾಯತಿಯ ಆದಾಯವು ಹೆಚ್ಚಾಗುತ್ತದೆ. ಈ ಉದ್ದಿಮೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಲೈಸೆನ್ಸ್ ನೀಡುವಾಗ ಹಾಗೂ ನವೀಕರಿಸುವಾಗ ಪಡೆಯಬಹುದಾಗಿದೆ. ವರ್ಷದ ಅಂತ್ಯಕ್ಕೆ ನವೀಕರಿಸದ ಹಾಗೂ ಲೈಸೆನ್ಸ್ ಪಡೆಯದ ಉದ್ದಿಮೆಗಳ ವಿವರಗಳನ್ನು ಸಮೀಕ್ಷೆಯ ಮೂಲಕ ಪಡೆಯಬಹುದಾಗಿದೆ ಮತ್ತು ಅವುಗಳಿಂದ ಸಾಮಾನ್ಯ ಮಾಹಿತಿಗೆ ಬೇಕಾದ ಅಂಕಿ ಅಂಶಗಳನ್ನು ಪಡೆಯಬಹುದು.

1.15 ಬ್ಲಾಕುವಾರು ಮತ್ತು ಕಾಲಂವಾರು ಅರ್ಥ ವಿವರಣೆ, ವ್ಯಾಖ್ಯೆ, ಪರಿಕಲ್ಪನೆ ಹಾಗೂ ಭರ್ತಿ ಮಾಡಬೇಕಾದ ವಿಷಯಗಳ ಕುರಿತು ವಿವರಗಳನ್ನು ಮುಂದಿನ ಕಂಡಿಕೆಗಳಲ್ಲಿ ನೀಡಲಾಗಿದೆ.

ಬ್ಲಾಕ್–0: ಮುಖ್ಯ ಮಾಹಿತಿ

*ಉಲ್ಲೇಖಿತ ವರ್ಷ:*

**I ಗ್ರಾಮದ ಗುರುತಿನ ವಿವರ ( 2011ರ ಜನಗಣತಿ ಮೇರೆ):**

**ರಾಜ್ಯ** : ಕರ್ನಾಟಕ

**ಜಿಲ್ಲೆ** : ಜಿಲ್ಲೆಯ ಹೆಸರನ್ನು ನಮೂದಿಸುವುದು

**ತಾಲ್ಲೂಕು** : ಜಿಲ್ಲೆಯಲ್ಲಿನ ತಾಲ್ಲೂಕಿನ ಹೆಸರನ್ನು ನಮೂದಿಸುವುದು

**ಹೋಬಳಿ**: ತಾಲ್ಲೂಕಿನಲ್ಲಿಯ ಹೋಬಳಿ ಹೆಸರನ್ನು ನಮೂದಿಸುವುದು

**ಗ್ರಾಮ ಪಂಚಾಯತ್** : ತಾಲ್ಲೂಕಿನಲ್ಲಿಯ ಗ್ರಾಮ ಪಂಚಾಯತಿ ಹೆಸರನ್ನು ನಮೂದಿಸುವುದು

**ಗ್ರಾಮ** : 2011ರ ಜನಗಣತಿಯನ್ವಯ ಗ್ರಾಮದ ಹೆಸರನ್ನು ನಮೂದಿಸುವುದು

**ಜನವಸತಿ** : ಗ್ರಾಮದಲ್ಲಿನ ಜನವಸತಿ ಹೆಸರನ್ನು ನಮೂದಿಸುವುದು

**II ಚುನಾವಣಾ ಮತಕ್ಷೇತ್ರಗಳ ವಿವರ:**

**ಲೋಕಸಭಾ ಕ್ಷೇತ್ರ** : ಜನವಸತಿಯ ಲೋಕಸಭಾ ಕ್ಷೇತ್ರವನ್ನು ನಮೂದಿಸುವುದು

**ವಿಧಾನಸಭಾ ಕ್ಷೇತ್ರ** : ಜನವಸತಿಯ ವಿಧಾನಸಭಾ ಕ್ಷೇತ್ರವನ್ನು ನಮೂದಿಸುವುದು

**ಜಿ.ಪಂ.ಸದಸ್ಯ ಕ್ಷೇತ್ರ** : ಜನವಸತಿಯ ಜಿಲ್ಲಾ ಪಂಚಾಯತ್ ಸದಸ್ಯ ಕ್ಷೇತ್ರವನ್ನು ನಮೂದಿಸುವುದು

**ತಾ.ಪಂ.ಸದಸ್ಯ ಕ್ಷೇತ್ರ** : ಜನವಸತಿಯ ತಾಲ್ಲೂಕು ಪಂಚಾಯತ್ ಸದಸ್ಯ ಕ್ಷೇತ್ರವನ್ನು ನಮೂದಿಸುವುದು

**ಗ್ರಾ.ಪಂ.ಸದಸ್ಯ ಕ್ಷೇತ್ರ** : ಜನವಸತಿಯ ಗ್ರಾಮ ಪಂಚಾಯತ್ ಸದಸ್ಯ ಕ್ಷೇತ್ರವನ್ನು ನಮೂದಿಸುವುದು

## ಬ್ಲಾಕ್–1: ಸಾಮಾನ್ಯ ಮಾಹಿತಿ

**A . ಗ್ರಾಮದ ಭೌಗೋಳಿಕ ವಿಸ್ತೀರ್ಣ ಹಾಗೂ ಜನಸಂಖ್ಯೆಯ ವಿವರ**

1. **ಅರಣ್ಯ:** ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ನಿಯಮಕ್ಕನುಸಾರವಾಗಿ ರಾಜ್ಯಕ್ಕೆ ಅಥವಾ ಖಾಸಗಿ ವ್ಯಕ್ತಿಗಳಿಗೆ ಸಂಬಂಧಿಸಿದ ಅರಣ್ಯ ಪ್ರದೇಶಗಳನ್ನು ಅರಣ್ಯವೆಂದು ಘೋಷಿಸಲ್ಪಟ್ಟ ಪ್ರದೇಶದಲ್ಲಿ ಮರಗಿಡಗಳಿರಲಿ, ಇಲ್ಲದಿರಲಿ ಮೇವಿಗಾಗಿ ಮೀಸಲಿರಿಸಿದ ಪ್ರದೇಶದಲ್ಲಿ ಮೇವು ಬೆಳೆದಿರಲಿ, ಇಲ್ಲದಿರಲಿ ಅರಣ್ಯವೆಂದು ಪರಿಗಣಿಸತಕ್ಕದ್ದು.
2. **ವ್ಯವಸಾಯೇತರ ಭೂಮಿ:** ವ್ಯವಸಾಯಕ್ಕಲ್ಲದೆ ಬೇರೆ ಉದ್ದೇಶಗಳಿಗೆ ಬಳಸಲಾಗಿರುವ ಭೂ ಪ್ರದೇಶ. ಉದಾಹರಣೆಗೆ : ಕಟ್ಟಡಗಳು, ನದಿ, ಕೆರೆ, ನಾಲಾ(ಜಲಾಶಯಗಳು), ರಸ್ತೆಗಳು, ರಸ್ತೆರೈಲುಗಳು ಇತ್ಯಾದಿ.
3. **ಬಂಜರು ಭೂಮಿ:** ಪರ್ವತಗಳು, ಮರಭೂಮಿಗಳು, ಬಹಳ ಹಣ ಖರ್ಚುಮಾಡದ ಹೊರತು ವ್ಯವಸಾಯಕ್ಕೆ ತರುವುದು ಸಾಧ್ಯವಿಲ್ಲದಂತಹ ಜಮೀನು, ಇಂತಹ ಜಮೀನು ಪ್ರತ್ಯೇಕವಾಗಿರುವಂತಹ ಗುಂಪುಗಳಲ್ಲಿ ಇರಲಿ, ಹಿಡುವಳಿ ಜಮೀನುಗಳಲ್ಲಿ ಇರಲಿ, ವ್ಯವಸಾಯಕ್ಕೆ ಯೋಗ್ಯವಿಲ್ಲದಂತಹ ಭೂ ವಿಸ್ತೀರ್ಣ.
4. **ಸಾಗುವಳಿಗೆ ಯೋಗ್ಯವಾದ ಬಂಜರು ಭೂಮಿ:** ವ್ಯವಸಾಯಕ್ಕೆ ಯೋಗ್ಯವಾದ ಬಂಜರು ಪ್ರದೇಶ, ಸಾಗುವಳಿಗೆ ತರದೇ ಇರತಕ್ಕಂಥ ಜಮೀನುಗಳನ್ನೂ ಸಾಗುವಳಿಗೆ ತಂದ ಮೇಲೆ ಕೆಲವು ವರ್ಷಗಳ ತರುವಾಯ ಒಂದಲ್ಲ ಮತ್ತೊಂದು ಕಾರಣಕ್ಕಾಗಿ ಸಾಗುವಳಿ ಮಾಡದೇ ಬಿಟ್ಟುಹೋದ ಜಮೀನುಗಳನ್ನು ಈ ಕಾಲಂನಲ್ಲಿ ನಮೂದಿಸಬೇಕು. ಈ ಜಮೀನುಗಳು ಸಾಗುವಳಿಯಲ್ಲಿಲ್ಲದಿರಬಹುದು ಅಥವಾ ಯಾವ ಕೆಲಸಕ್ಕೂ ಬಾರದಿರುವ ಕುರುಚಲು ಗಿಡಗಳಿಂದ ಮತ್ತು ಕಾಡುಗಳಿಂದ ತುಂಬಿರಬಹುದು ಅಥವಾ ಸಾಗುವಳಿ ನಡೆಯುತ್ತಿರುವಂಥ ಜಮೀನುಗಳಲ್ಲಿರಬಹುದು. ಅಲ್ಲದೇ ಒಂದು ಸಾರಿ ಸಾಗುವಳಿ ನಡೆದ ಮೇಲೆ ಸತತವಾಗಿ ಐದು ವರ್ಷಗಳವರೆವಿಗೆ ಸಾಗುವಳಿಯೇ ನಡೆಯದೆ ನಿಂತು ಹೋಗಿರುವಂಥ ಜಮೀನುಗಳನ್ನು ಕೂಡ ಈ ವರ್ಗದಲ್ಲಿ ಸೇರಿಸಬೇಕು.
5. **ಖಾಯಂ ಗೋಮಾಳ:** ಎಲ್ಲಾ ಮೇವಿನ ಜಮೀನುಗಳೂ, ಖಾಯಂ ಗೋಮಾಳಗಳು, ಹುಲ್ಲುಗಾವಲುಗಳನ್ನು ಈ ಕಾಲಂನಲ್ಲಿ ನಮೂದಿಸುವುದು.
6. **ವೃಕ್ಷ ಮತ್ತು ತೋಪುಗಳು:** ಸಾಗುವಳಿಯಲ್ಲಿರುವ ಅಂದರೆ ಕಾಲಂ 12ರಲ್ಲಿ ನಮೂದಾಗಿರದ ವ್ಯವಸಾಯಕ್ಕೆ ಸಂಬಂಧದ ಯಾವುದಾದರೂ ಕೆಲಸಕ್ಕೆ ಉಪಯೋಗಿಸುವಂಥ ಎಲ್ಲಾ ಜಮೀನುಗಳನ್ನು ಈ ಕಾಲಂನಲ್ಲಿ ಸೇರಿಸಬೇಕು. ಸರ್ವೇ ಮರಗಳನ್ನು, ಛಾವಣಿ ಹುಲ್ಲನ್ನು, ಬಿದಿರು ಮೆಳೆಗಳನ್ನು ಅಥವಾ ಸೌದೆಗೆ ಒದಗುವಂಥ (ಸರ್ವೇ ಮರಗಳನ್ನು ಬಿಟ್ಟು) ಇತರೆ ಮರಗಳ ತೋಪುಗಳನ್ನು ಬೆಳೆಸುವುದಕ್ಕೆ ಉಪಯೋಗಿಸುವ ಜಮೀನುಗಳನ್ನು ಈ ಕಾಲಂನಲ್ಲಿ ನಮೂದಿಸುವುದು.
7. **ಚಾಲ್ತಿ ಬೀಳು ಭೂಮಿ:** ಚಾಲ್ತಿ ಸಾಲಿನಲ್ಲಿ ಸಾಗುವಳಿ ಮಾಡದೇ ಬೀಳು ಬಿಟ್ಟಿರುವಂಥ ಪ್ರದೇಶ. ಉದಾಹರಣೆಗೆ ಯಾವುದಾದರೂ ಒಟ್ಟಲು ಸಸಿ ಪ್ರದೇಶದಲ್ಲಿ ಸದರಿ ವರ್ಷದಲ್ಲಿ ಬೆಳೆಯನ್ನಿಡದೆ ಬಿಟ್ಟಿದ್ದ ಪಕ್ಷದಲ್ಲಿ ಇಂಥ ಜಮೀನನ್ನು ಚಾಲ್ತೀ ಸಾಲಿನ ಬೀಳು ಜಮೀನು ಎಂದು ನಮೂದಿಸುವುದು.
8. **ಇತರೆ ಬೀಳು ಭೂಮಿ:** ಬೇಸಾಯಕ್ಕೆ ಉಪಯೋಗಿಸಿಕೊಂಡಿದ್ದ, ಅಂದರೆ ಒಂದು ವರ್ಷಕ್ಕೆ ಕಡಿಮೆ ಯಿಲ್ಲದೆ ಮತ್ತು ಐದು ವರ್ಷಗಳ ಅವಧಿಗೆ ಮೀರದೆ ತಾತ್ಕಾಲಿಕವಾಗಿ ಬೇಸಾಯ ಮಾಡದೆ ಇರುವಂಥ ಎಲ್ಲಾ ಜಮೀನುಗಳನ್ನು ಈ ಕಾಲಂನಲ್ಲಿ ನಮೂದಿಸಬೇಕು. ಹಾಗೆ ಜಮೀನುಗಳನ್ನು ಬೇಸಾಯ ಮಾಡದೆ ಬೀಳು ಬಿಟ್ಟಿರುವುದಕ್ಕೆ ಕಾರಣರು ಈ ಕೆಳಗೆ ಕಂಡವುಗಳಲ್ಲಿ ಯಾವುದಾದರೂ ಆಗಿರಬಹುದು (1) ರೈತರ ಬಡತನ (2) ನೀರು ಸರಬರಾಜು ಸಾಕಷ್ಟಿಲ್ಲದಿರುವುದು (3) ನಾಲೆ ಮತ್ತು ನದಿಗಳಲ್ಲಿ ಹೂಳು ತುಂಬಿರುವುದು (4) ಮಲೇರಿಯಾ ಹವಾಗುಣ ಮತ್ತು (5) ಬೇಸಾಯವು ಲಾಭದಾಯಕವಲ್ಲದಿರುವುದು.
9. **ನಿವ್ವಳ ಬಿತ್ತನೆಯಾದ ಪ್ರದೇಶ:**
   ಬೆಳೆಗಳು (ತೋಟದ ಬೆಳೆಗಳನ್ನು ಸೇರಿಸಿ) ಬಿತ್ತನೆಯಾಗಿರುವ ಒಟ್ಟು ಪ್ರದೇಶವಾಗಿರುತ್ತದೆ. ಒಂದಕ್ಕಿಂತ ಹೆಚ್ಚು ಸಾರಿ ಬಿತ್ತನೆಯಾದ ಕ್ಷೇತ್ರವನ್ನು ಸಂಬಂಧಪಟ್ಟ ವರ್ಷದಲ್ಲಿ ಒಂದೇ ಒಂದು ಸಾರಿ ಎಣಿಕೆಗೆ ಪರಿಗಣಿಸಬೇಕು.

**10. ಭೌಗೋಳಿಕ ವಿಸ್ತೀರ್ಣ:**

ಮೇಲಿನ ಕ್ರಮ ಸಂಖ್ಯೆ 1 ರಿಂದ 9ರವರೆಗೆ ಕ್ರೋಢೀಕರಿಸಿದ ವಿಸ್ತೀರ್ಣವನ್ನು ಇಲ್ಲಿ ನಮೂದಿಸುವುದು, ಇದು ಗ್ರಾಮದ ಭೌಗೋಳಿಕ ವಿಸ್ತೀರ್ಣಕ್ಕೆ ಸಮವಾಗಿರಬೇಕು.

**10.A ಒಟ್ಟು ಬಿತ್ತನೆಯಾದ ಪ್ರದೇಶ :** ಫಸಲುಗಳನ್ನೊಳಗೊಂಡ ಒಟ್ಟು ಪ್ರದೇಶವನ್ನು ಈ ಕಾಲಂನಲ್ಲಿ ನಮೂದಿಸಬೇಕು. ಪ್ರತಿಯೊಂದು ಋತುವಿನಲ್ಲಿಯೂ ತೆಗೆದ ಬೆಳೆಗಳ ಮೊತ್ತವನ್ನು ಕೊಡತಕ್ಕದ್ದು. ಸಂಬಂಧಪಟ್ಟ ವರ್ಷದಲ್ಲಿ ಒಂದು ಸಲಕ್ಕಿಂತಲೂ ಹೆಚ್ಚು ಸಲ ಬೆಳೆ ತೆಗದುಕೊಂಡ ಪ್ರದೇಶಗಳನ್ನು ಪ್ರತಿಯೊಂದು ಫಸಲಿನ ವಿಷಯದಲ್ಲೂ ಅಂಥ ಪ್ರತಿಯೊಂದು ಸಲಕ್ಕೂ ಪ್ರತ್ಯೇಕ ಪ್ರತ್ಯೇಕ ಪ್ರದೇಶಗಳಾಗಿಯೇ ಪರಿಗಣಿಸಿ ಸೇರಿಸಿ ನಮೂದಿಸುವುದು.

**10.B ಒಟ್ಟು ನೀರಾವರಿಯಾದ ಕ್ಷೇತ್ರ:** ಮಳೆಯನ್ನು ಅವಲಂಬಿಸದೆ ಬಾವಿ, ಕೆರೆ, ನದಿ, ಹಳ್ಳ, ಕಾಲುವೆ, ಕೊಳವೆಬಾವಿ ಮತ್ತಿತರ ಮೂಲಗಳಿಂದ ಬಿತ್ತನೆಯಾದ ಕ್ಷೇತ್ರವನ್ನು ನೀರಾವರಿ ಕ್ಷೇತ್ರವೆಂದು ನಮೂದಿಸುವುದು.

**11. ಜನಸಂಖ್ಯೆ:** 2011ರ ಜನಗಣತಿಯನ್ವಯ ಗ್ರಾಮದ ಒಟ್ಟು ಜನಸಂಖ್ಯೆ (ಪುರುಷ, ಮಹಿಳೆ, ಒಟ್ಟು)

**12. ಪರಿಶಿಷ್ಟ ಜಾತಿ:** 2011ರ ಜನಗಣತಿಯನ್ವಯ ಗ್ರಾಮದ ಒಟ್ಟು ಜನಸಂಖ್ಯೆ ಪರಿಶಿಷ್ಟ ಜಾತಿ ಜನಸಂಖ್ಯೆ (ಪುರುಷ, ಮಹಿಳೆ, ಒಟ್ಟು)

**13. ಪರಿಶಿಷ್ಟ ಪಂಗಡ:** 2011ರ ಜನಗಣತಿಯನ್ವಯ ಗ್ರಾಮದ ಒಟ್ಟು ಜನಸಂಖ್ಯೆ ಪರಿಶಿಷ್ಟ ಪಂಗಡ ಜನಸಂಖ್ಯೆ (ಪುರುಷ, ಮಹಿಳೆ, ಒಟ್ಟು)

**14. ಕುಟುಂಬಗಳು:** 2011ರ ಜನಗಣತಿಯನ್ವಯ ಗ್ರಾಮದಲ್ಲಿನ ಕುಟುಂಬಗಳ ಸಂಖ್ಯೆ (ಪ.ಜಾ., ಪಂ.ಪಂ., ಇತರೆ, ಒಟ್ಟು)

**15. ವಿಕಲಚೇತನರು:**

(ಅ) **ದೃಷ್ಟಿ :** ಕಣ್ಣು ಕಾಣದೆ ಇರುವ ಜನರ ಸಂಖ್ಯೆ (ಪುರುಷ, ಮಹಿಳೆ, ಒಟ್ಟು)

(ಆ) **ಶ್ರವಣ :** ಕಿವಿ ಕೇಳದೆ ಇರುವವರ ಸಂಖ್ಯೆ (ಪುರುಷ, ಮಹಿಳೆ, ಒಟ್ಟು)

(ಇ) **ಮಾತು ಬಾರದವರು :** ಮಾತನಾಡಲು ಬರದೆ ಇರುವವರ ಸಂಖ್ಯೆ (ಪುರುಷ, ಮಹಿಳೆ, ಒಟ್ಟು)

(ಈ) **ಅಂಗ ವೈಕಲ್ಯತೆ :** ದೇಹದ ಯಾವುದಾದರೂ ಅಂಗ ಇಲ್ಲದೇ ಇರುವವರ ಸಂಖ್ಯೆ (ಪುರುಷ, ಮಹಿಳೆ, ಒಟ್ಟು)

(ಉ) **ಬುದ್ಧಿ ಮಾಂದ್ಯತೆ :** ಬುದ್ಧಿಹೀನತೆ ಇರುವವರ ಸಂಖ್ಯೆ (ಪುರುಷ, ಮಹಿಳೆ, ಒಟ್ಟು)

**B. ಗ್ರಾಮದಲ್ಲಿ ಲಭ್ಯವಿರುವ ಕೆಲವು ಮೂಲಸೌಕರ್ಯಗಳು:**

**16. ಮನೆಗಳಿಗೆ ವಿದ್ಯುದ್ದೀಕರಣ : ಹಳ್ಳಿಯಲ್ಲಿ ಕಡೇ ಪಕ್ಷ ಒಂದು ಮನೆಗೆ (ಹೌದು–1, ಇಲ್ಲ–2)**

ಗ್ರಾಮದಲ್ಲಿ ಒಂದು ಮನೆಗಾದರೂ ವಿದ್ಯುತ್ ಸಂಪರ್ಕವಿದ್ದರೆ ಸಂಕೇತ–1ನ್ನು ನಮೂದಿಸುವುದು. ಇಲ್ಲದಿದ್ದರೆ ಸಂಕೇತ–2ನ್ನು ನಮೂದಿಸುವುದು.

**17. ಪುನರ್ ಬಳಕೆ ನವೀಕೃತ ಇಂಧನ ಉಪಯೋಗಿಸುವುದು (ಹಳ್ಳಿಯಲ್ಲಿ ಕಡೇ ಪಕ್ಷ ಒಂದು ಮನೆಗೆ) (ಹೌದು–1, ಇಲ್ಲ–2):**

ಪುನರ್ ಬಳಕೆ ಇಂಧನಕ್ಕೆ ಉದಾಹರಣೆಗಳು, ಸೌರಶಕ್ತಿ, ಪವನ ಶಕ್ತಿ ಇತರೆ.

ಗ್ರಾಮದಲ್ಲಿ ಒಂದು ಮನೆಗಾದರೂ ಪುನರ್ ಬಳಕೆ ಇಂಧನ ಸಂಪರ್ಕವಿದ್ದರೆ/ಅಸಾಂಪ್ರದಾಯಿಕ ಇಂಧನವನ್ನು ಬಳಸುತ್ತಿದ್ದರೆ ಸಂಕೇತ–1ನ್ನು ನಮೂದಿಸುವುದು.

**18. ಹಳ್ಳಿಯಲ್ಲಿ ಕಡೇ ಪಕ್ಷ ಒಂದು ಕೇಬಲ್ ಕನೆಕ್ಷನ್ (ಹೌದು–1, ಇಲ್ಲ–2):**

ಕೇಬಲ್ ಸಂಪರ್ಕವನ್ನು ಕೇಬಲ್ ಆಪರೇಟರ್ ಮುಖಾಂತರ ಅಥವಾ ಡಿ.ಟಿ.ಹೆಚ್./ಡಿಸ್ಕ್ ಮುಖಾಂತರ ಒದಗಿಸಲಾಗುತ್ತದೆ. ಗ್ರಾಮದಲ್ಲಿ ಯಾವುದೇ ಮನೆಗೆ ಈ ಸೌಲಭ್ಯವಿದ್ದರೆ ಸಂಕೇತ– 1ನ್ನು ನಮೂದಿಸುವುದು.

**19. ಗ್ರಾಮಕ್ಕೆ ಕುಡಿಯುವ ನೀರಿನ ಮುಖ್ಯ ಮೂಲ (ನಲ್ಲಿ–1, ಕೊಳವೆಬಾವಿ/ಕೈಪಂಪು–2, ಬಾವಿ–3, ಕುಡಿಯುವ ನೀರಿಗಾಗಿ ಇರುವ ಅರಕ್ಷಿತ ಕೆರೆ–4, ಇತರೆ ಮೂಲ–9):**

ಗ್ರಾಮದಲ್ಲಿ ಕುಡಿಯುವ ನೀರಿಗಾಗಿ ಹೆಚ್ಚಿನ ಕುಟುಂಬಗಳು ಉಪಯೋಗಿಸುವ ಮೂಲವನ್ನು ಮುಖ್ಯ ಮೂಲವೆಂದು ಪರಿಗಣಿಸುವುದು. ಪೈಪುಗಳ ಮುಖಾಂತರ ಸ್ಥಳೀಯ ಸಂಸ್ಥೆ ಅಥವಾ ಇತರೆ ಸಂಸ್ಥೆಗಳಿಂದ ಕುಡಿಯುವ ನೀರು ಸರಬರಾಜಾಗುತ್ತಿದ್ದರೆ ನಲ್ಲಿ ನೀರೆಂದು ಪರಿಗಣಿಸುವುದು (ಸಂಕೇತ–1). ಇತರ ಸಂಕೇತಗಳನ್ನು ಸಂಬಂಧಪಟ್ಟಂತೆ ನಮೂದಿಸುವುದು.

**20. ಚರಂಡಿ ವ್ಯವಸ್ಥೆ ಗ್ರಾಮದಲ್ಲಿ ಹಾದು ಹೋಗುತ್ತದೆಯೇ? (ಹೌದು–1, ಇಲ್ಲ–2):**

ಗ್ರಾಮದಲ್ಲಿ ಚರಂಡಿ ವ್ಯವಸ್ಥೆಯು ಸ್ವಾಭಾವಿಕವಾಗಿದ್ದರೆ ಅಥವಾ ಮಾನವ ನಿರ್ಮಿತವಾಗಿದ್ದು ಕಾರ್ಯಾಚರಣೆಯಲ್ಲಿದ್ದರೆ ಸಂಕೇತ–1ನ್ನು, ಇಲ್ಲದಿದ್ದರೆ ಸಂಕೇತ–2ನ್ನು ನಮೂದಿಸುವುದು

**21. ಸರ್ಕಾರಿ ನಿಯಂತ್ರಿತ ನೀರಾವರಿ ವ್ಯವಸ್ಥೆ 22. ಸಹಕಾರಿ ಸಂಘ ವ್ಯವಸ್ಥೆ 23. ಸ್ವಸಹಾಯ ಗುಂಪು 24, ವಯಸ್ಕರ ಶಿಕ್ಷಣ 25. ಸಾಲದ ಸಂಘಸಂಸ್ಥೆ/ಸಹಕಾರಿ ಸಾಲದ ಸಂಘಸಂಸ್ಥೆ:**

ಗ್ರಾಮದಲ್ಲಿ ಕಾರ್ಯನಿರ್ವಹಿಸುತ್ತಿದ್ದಲ್ಲಿ ಸಂಕೇತ–1ನ್ನು, ಇಲ್ಲದಿದ್ದರೆ ಸಂಕೇತ–2ನ್ನು ಸಂಬಂಧಪಟ್ಟವುಗಳ ಮುಂದೆ ನಮೂದಿಸುವುದು.

**26. ವಾಣಿಜ್ಯ ಬ್ಯಾಂಕ್ ಅಥವಾ ಕೃಷಿ ಬ್ಯಾಂಕ್ ಇದೆಯೇ ? (ಹೌದು–1, ಇಲ್ಲ – 2):**

ಇದು ರಾಷ್ಟ್ರೀಕೃತ ಮತ್ತು ರಾಷ್ಟ್ರೀಕೃತವಲ್ಲದ ಬ್ಯಾಂಕ್‌ಗಳನ್ನೊಳಗೊಂಡಿರುತ್ತದೆ. ಯಾವುದೇ ಬ್ಯಾಂಕಿನ ಶಾಖೆಯು ಈ ವ್ಯಾಖ್ಯಾನದಂತೆ ಗ್ರಾಮದಲ್ಲಿದ್ದರೆ, ಸಂಕೇತ–1ನ್ನು ನಮೂದಿಸುವುದು. ಇಲ್ಲವಾದರೆ ಸಂಕೇತ –2ನ್ನು ನಮೂದಿಸುವುದು.

**27. ಗ್ರಾಮದಲ್ಲಿ ಪಕ್ಕಾ ರಸ್ತೆ ಇದೆಯೇ? (ಹೌದು–1 , ಇಲ್ಲ – 2):**

ಗ್ರಾಮದಲ್ಲಿ ಪಕ್ಕಾ ರಸ್ತೆ ಇದ್ದರೆ ಸಂಕೇತ–1ನ್ನು ನಮೂದಿಸುವುದು. ಇಲ್ಲವಾದರೆ ಸಂಕೇತ–2ನ್ನು ನಮೂದಿಸುವುದು.

**28. ಹತ್ತಿರವಿರುವ ಪಟ್ಟಣಕ್ಕೆ ಬಸ್ ಸೌಲಭ್ಯವಿದೆಯೇ? (ಸೌಲಭ್ಯವಿಲ್ಲ–1, ಐದಕ್ಕಿಂತ ಕಡಿಮೆ ಸೌಲಭ್ಯ–2, ಕಡೇಪಕ್ಷ ಐದು –3):**

ಇದರಲ್ಲಿ ಒಂದು ನಿರ್ದಿಷ್ಟ ಮಾರ್ಗದಲ್ಲಿ ನಿಯಮಿತ ದರಗಳಲ್ಲಿ ಸಂಚರಿಸುವ ಸರ್ಕಾರಿ/ಖಾಸಗಿ ಬಸ್ಸುಗಳು ಸೇರುತ್ತವೆ. ಸಂಕೇತ–1, 2 ಅಥವಾ 3 ನ್ನು ಖಾಸಗಿ ಹಾಗೂ ಸರ್ಕಾರಿ ಬಸ್ಸುಗಳೆರಡರ ಓಡಾಟದ ಸಂಖ್ಯೆಯನ್ನು ತಿಳಿದು ಸೂಕ್ತ ಸಂಕೇತವನ್ನು ನಮೂದಿಸುವುದು.

**29.** ಗ್ರಾಮದಲ್ಲಿ **ಶಿಶುಪಾಲನಾ ಕೇಂದ್ರ** ಇದೆಯೇ? ಈ ಸೌಲಭ್ಯಗಳಿದ್ದರೆ ಸಂಕೇತ–1ನ್ನು ನಮೂದಿಸುವುದು. ಇಲ್ಲವಾದರೆ ಸಂಕೇತ–2ನ್ನು ನಮೂದಿಸುವುದು.

**30. ಗ್ರಾಮದಲ್ಲಿ ಬೀದಿ ದೀಪ ಸೌಲಭ್ಯವಿದೆಯೇ? (ಹೌದು–1, ಇಲ್ಲ – 2)** :ಗ್ರಾಮದಲ್ಲಿ ಬೀದಿ ದೀಪ ಸೌಲಭ್ಯವನ್ನು ರಾತ್ರಿ ಸಂಪೂರ್ಣವಾಗಿ ಅಥವಾ ರಾತ್ರಿ ಸ್ವಲ್ಪ ಹೊತ್ತು ಸ್ಥಳೀಯ ಸಂಸ್ಥೆಗಳು ಒದಗಿಸಿದ್ದರೆ ಸಂಕೇತ–1ನ್ನು ನಮೂದಿಸುವುದು. ಇಲ್ಲವಾದರೆ ಸಂಕೇತ–2ನ್ನು ನಮೂದಿಸುವುದು.

**ಅ. ಆಸ್ತಿಪ್ರಾಪ್ತಿ:**

**31. ಗ್ರಾಮದ 5 ಕಿ.ಮೀ. ವ್ಯಾಪ್ತಿಯಲ್ಲಿರುವ ಕಾರ್ಖಾನೆಗಳ ಸಂಖ್ಯೆ:**

ಗ್ರಾಮದಲ್ಲಿ ಹಾಗೂ ಸಮೀಪದ 5 ಕಿ.ಮೀ. ವ್ಯಾಪ್ತಿಯಲ್ಲಿರುವ ಕಾರ್ಖಾನೆಗಳ ಸಂಖ್ಯೆಗಳನ್ನು ನಮೂದಿಸುವುದು.

**32. ಗ್ರಾಮದ 5 ಕಿ.ಮೀ. ವ್ಯಾಪ್ತಿಯಲ್ಲಿರುವ ಹೊಸ ಸೇತುವೆಗಳ ಸಂಖ್ಯೆ:**

ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಲೋಕೋಪಯೋಗಿ/ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಗಳಿಂದ ಕಾಂಕ್ರೀಟ್ ಮತ್ತು ಮರದಿಂದ ನಿರ್ಮಿಸಿದ ಸೇತುವೆಗಳನ್ನು ಮಾತ್ರ ನಮೂದಿಸುವುದು.

**33. ಗ್ರಾಮದಲ್ಲಿ 5 ಕಿ.ಮೀ. ವ್ಯಾಪ್ತಿಯಲ್ಲಿರುವ ಅತಿ ಹೆಚ್ಚು ವ್ಯವಹಾರ/ವ್ಯಾಪಾರ ಹೊಂದಿರುವ ಉದ್ದಿಮೆಗಳ (1 ಕೋಟಿ ರೂ.ಗಳಿಗೂ ಹೆಚ್ಚಾಗಿ ವ್ಯವಹಾರ ನಡೆಸುವ) ಸಂಖ್ಯೆ:**

ವಾರ್ಷಿಕ ಒಂದು ಕೋಟಿ ರೂಪಾಯಿಗಳಿಗಿಂತ ಹೆಚ್ಚು ವಹಿವಾಟು ಹೊಂದಿರುವ ದೊಡ್ಡ ವ್ಯಾಪಾರಿ ಸಂಸ್ಥೆಗಳನ್ನು ದಾಖಲಿಸುವುದು. ದಾಖಲಿಸುವವರು ವ್ಯಾಪಾರಿ ಸಂಸ್ಥೆಯ ತುಲನಾತ್ಮಕ ಪಟ್ಟಿಯನ್ನು ಪರಿಶೀಲಿಸುವ ಅವಶ್ಯಕತೆಯಿಲ್ಲ. ಈ ಮಾಹಿತಿಯನ್ನು ತಿಳಿದಿರುವ ವ್ಯಕ್ತಿಯಿಂದ ತೆಗೆದುಕೊಳ್ಳಬಹುದು. ಸಂಸ್ಥೆಯು ತನ್ನ ವಹಿವಾಟಿನ ಮಾಹಿತಿಯನ್ನು ಒದಗಿಸಲು ಇಚ್ಛಿಸಿದರೆ ಅದನ್ನು ತೆಗೆದುಕೊಳ್ಳಬಹುದು.

**34. ಗ್ರಾಮದಲ್ಲಿ ಗುಂಪು ತೋಟ (ಔಡಿಛ್ಟಿಜಿಡಿಢ) ಬೆಳೆಸಲಾಗಿದೆಯೇ? (ಹೌದು–1, ಇಲ್ಲ–2)** :

ಎಲ್ಲ ತೋಟಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ಅದರಂತೆ ನಮೂದಿಸುವುದು.

**35. ಗ್ರಾಮದ 5 ಕಿ.ಮೀ. ಒಳಗೆ ಘೋಷಿಸಿರುವ ಅರಣ್ಯ ಪ್ರದೇಶವಿದೆಯೇ ? (ಹೌದು–1, ಇಲ್ಲ–2):**

ಗ್ರಾಮದಲ್ಲಿ ಘೋಷಿತ ಅರಣ್ಯವಿದ್ದರೆ ಸಂಕೇತ 1ನ್ನು ನಮೂದಿಸುವುದು.

**36. ಸ್ಮಶಾನ ಸೌಲಭ್ಯ (ಹೌದು–1, ಇಲ್ಲ–2)** :

ಗ್ರಾಮದಲ್ಲಿ ಯಾವುದೇ ಧರ್ಮದ ಸ್ಮಶಾನ ಇದ್ದರೆ, ಸಂಕೇತ–1 ಎಂದು, ಇಲ್ಲದಿದ್ದರೆ ಸಂಕೇತ–2 ಎಂದು ನಮೂದಿಸುವುದು.

**ಆ. ಹತ್ತಿರದ ಸೌಲಭ್ಯಗಳಿಗೆ ಇರುವ ದೂರ:**

**37. ಗ್ರಾಮ ಪಂಚಾಯತ್ ಕೇಂದ್ರ ಸ್ಥಾನ 38. ತಾಲ್ಲೂಕು ಕೇಂದ್ರ ಸ್ಥಾನ 39. ಬಸ್ ನಿಲ್ದಾಣಗಳಿಗೆ** ಗ್ರಾಮದಲ್ಲಿಯೇ ಸೌಲಭ್ಯವಿದ್ದರೆ **'00'** ನೀಡುವುದು. ದೂರವು 99 ಕಿ.ಮೀ.ಗಿಂತ ಹೆಚ್ಚಿದ್ದರೆ **'99'** ನೀಡುವುದು. ಇದರ ಒಳಗೆ ಇದ್ದರೆ ಸರಿಯಾದ ಕಿ.ಮೀ.ನ್ನು ನಮೂದಿಸುವುದು.

**40. ಜೆಲ್ಲಿಕಲ್ಲು ರಸ್ತೆ, 41. ಸರ್ವ ಋತು ರಸ್ತೆ:**

ಈ ಮೇಲಿನ ರಸ್ತೆಗಳು ಹಳ್ಳಿಯ ಮೂಲಕ ಹಾದುಹೋಗಿದ್ದರೆ ಕೋಡ್ (00) ನಮೂದಿಸುವುದು. ಇಲ್ಲವಾದರೆ ಈ ರಸ್ತೆಗಳಿಂದ ಹಳ್ಳಿಗೆ ಇರುವ ದೂರವನ್ನು ನಮೂದಿಸುವುದು.

**ಶಾಲೆಗಳು (42. ರಿಂದ 46 ರವರೆಗೆ):**

**ಶಾಲೆಯ ವಿಧಗಳು:–** ಸರ್ಕಾರಿ ಶಾಲೆ, ಅನುದಾನಿತ ಶಾಲೆ ಮತ್ತು ಅನುದಾನ ರಹಿತ ಶಾಲೆ; ಜನವಸತಿಯಲ್ಲಿ ಈ ಶಾಲೆಗಳಿದ್ದಲ್ಲಿ, (00) ನಮೂದಿಸುವುದು. ಇಲ್ಲದಿದ್ದಲ್ಲಿ ಗ್ರಾಮದಿಂದ ಈ ಶಾಲೆಗಳಿಗೆ ಇರುವ ಹತ್ತಿರದ ದೂರವನ್ನು ನಮೂದಿಸುವುದು.

**47. ಪದವಿ ಕೋರ್ಸುಗಳನ್ನು ಹೊಂದಿರುವ ಕಾಲೇಜು:**

ವಿಶ್ವವಿದ್ಯಾಲಯದಿಂದ ಮಾನ್ಯತೆ ಪಡೆದ ಪದವಿ ಕೋರ್ಸು ಅಥವಾ ಪದವಿಗೆ ಸಮಾನವಾದ ಡಿಪ್ಲೊಮಾ ಕೋರ್ಸನ್ನು ಒದಗಿಸುವ ಸಂಸ್ಥೆಯಿಂದ ಇರುವ ದೂರವನ್ನು ನಮೂದಿಸುವುದು. ಈ ಸೌಲಭ್ಯವು ಗ್ರಾಮದ ಒಳಗಿದ್ದರೆ (00) ಇಲ್ಲವಾದರೆ ಗ್ರಾಮದಿಂದ ಇರುವ ದೂರವನ್ನು ನಮೂದಿಸುವುದು.

**48. ಸ್ನಾತಕೋತ್ತರ ಪದವಿ(ಪಿ.ಜಿ) ಸೌಲಭ್ಯ ಹೊಂದಿರುವ ಕಾಲೇಜು/ವಿಶ್ವವಿದ್ಯಾಲಯ:**

ಕನಿಷ್ಠ ಒಂದು ವಿಷಯದಲ್ಲಿ ಮಾಸ್ಟರ್ ಡಿಗ್ರಿ ಕೋರ್ಸುಗಳನ್ನು ನೀಡುವ ಸಂಸ್ಥೆಗಳು ಗ್ರಾಮದಿಂದ ಇರುವ ದೂರವನ್ನು ನಮೂದಿಸಬೇಕು. ಕಾಲೇಜು/ವಿಶ್ವವಿದ್ಯಾಲಯ ಗ್ರಾಮದ ಒಳಗಿದ್ದರೆ (00), ಇಲ್ಲವಾದರೆ ಗ್ರಾಮದಿಂದ ಇರುವ ದೂರವನ್ನು ನಮೂದಿಸುವುದು

**49. 50. 51. 52. 53. 54. ಕೈಗಾರಿಕಾ ತರಬೇತಿ ಸಂಸ್ಥೆ, ಅಸಾಂಪ್ರದಾಯಿಕ ವಿದ್ಯಾಸಂಸ್ಥೆ, ಪಶು ವೈದ್ಯಕೀಯ ಉಪಕೇಂದ್ರ/ಚಿಕಿತ್ಸಾಲಯ, ಪ್ರಾಥಮಿಕ/ಸಾಮೂಹಿಕ/ ಸರ್ಕಾರಿ ಆರೋಗ್ಯ ಕೇಂದ್ರ/ ಘಟಕ/ಔಷಧ ಅಂಗಡಿ/ ಅಂಚೆ ಕಛೇರಿ:**

ಈ ಮೇಲಿನ ಸೌಲಭ್ಯಗಳು ಗ್ರಾಮದಲ್ಲಿದ್ದರೆ 00 ಎಂದು, ಇಲ್ಲವಾದರೆ ಸಮೀಪದ ದೂರವನ್ನು ನಮೂದಿಸುವುದು.

**55. ಬ್ಯಾಂಕ್:**

ಎಲ್ಲಾ ರಾಷ್ಟ್ರೀಕೃತ ಬ್ಯಾಂಕ್, ಸಹಕಾರಿ ಬ್ಯಾಂಕ್, ಖಾಸಗಿ ಬ್ಯಾಂಕ್ ಅಥವಾ ವಿದೇಶಿ ಬ್ಯಾಂಕ್ ಶಾಖೆಗಳ ಸೌಲಭ್ಯ ಹಳ್ಳಿಯ ಒಳಗೆ ಇದ್ದರೆ 00 ಎಂದು, ಇಲ್ಲವಾದರೆ ಸಮೀಪದ ದೂರವನ್ನು ನಮೂದಿಸುವುದು.

**56. 57. 58. ನ್ಯಾಯ ಬೆಲೆ ಅಂಗಡಿ, ವಾರದ ಸಂತೆ, ಗೊಬ್ಬರ/ಕೀಟನಾಶಕದ ಅಂಗಡಿ:** ಈ ಸೌಲಭ್ಯ ಹಳ್ಳಿಯ ಒಳಗೆ ಇದ್ದರೆ 00 ನಮೂದಿಸುವುದು ಇಲ್ಲವಾದರೆ ಸಮೀಪದ ದೂರವನ್ನು ನಮೂದಿಸುವುದು.

**59. ಇ– ಮೇಲ್ (ಮಿಂಚಂಚೆ) ಸೌಲಭ್ಯ:**

ಗ್ರಾಮದ ಯಾವುದಾದರೂ ಮನೆಯಲ್ಲಿ ಈ ಸೌಲಭ್ಯವಿದ್ದರೆ 00 ಎಂದು ನಮೂದಿಸುವುದು. ಇಲ್ಲವಾದರೆ ಸಮೀಪದ ದೂರದಲ್ಲಿ ಈ ಸೌಲಭ್ಯವು ವಾಣಿಜ್ಯ ಉಪಯೋಗಕ್ಕಿರುವ ಕೇಂದ್ರದಿಂದ ಇರುವ ದೂರವನ್ನು ನಮೂದಿಸುವುದು. ನೆರೆಹಳ್ಳಿಯಲ್ಲಿ ತಮ್ಮ ಸ್ವಂತಕ್ಕೆ ಈ ಸೌಲಭ್ಯವನ್ನು ಬಳಸಿಕೊಳ್ಳುತ್ತಿದ್ದರೆ ಅದನ್ನು ಗಣನೆಗೆ ತೆಗೆದುಕೊಳ್ಳುವಂತಿಲ್ಲ.

**60. 61. 62. 63. 64. 65. 66. 67. 68. 69. 70. 71. 72. 73. 74. ಸಾರ್ವಜನಿಕ ಟೆಲಿಫೋನ್ ವ್ಯವಸ್ಥೆ/ ಕುರುಡರಿಗೆ ವಿಶೇಷ ಶಾಲೆ/ ಬುದ್ಧಿಮಾಂದ್ಯರಿಗೆ ವಿಶೇಷ ಶಾಲೆ/ ಉದ್ಯೋಗ ತರಬೇತಿ/ ವಿಕಲಚೇತನ (ಅಂಗವಿಕಲರ) ಪುನರ್ವಸತಿ ಕೇಂದ್ರ ಸಂಸ್ಥೆಗಳು/ ರೈಲು ನಿಲ್ದಾಣ/ ವಿಮಾನ ನಿಲ್ದಾಣ/ ಜಿಲ್ಲಾ ಕೇಂದ್ರ/ ರಾಜ್ಯದ ರಾಜಧಾನಿ/ ಪೊಲೀಸ್ ಠಾಣೆ / ಅಂಗನವಾಡಿ ಮಧ್ಯಾಹ್ನ ಊಟದ ಕೇಂದ್ರ / ಕೃಷಿ ಸಾಲ ನೀಡಿಕೆ ಸಹಕಾರಿ ಸಂಘ / ಸಾಮೂಹಿಕ ಕೇಂದ್ರ ಟಿ.ವಿ. ಸಹಿತ/ರಹಿತ/ ಮನೋವಿಹಾರ (ಕ್ಲಬ್‌ಪಾರ್ಕ್ ಗಾರ್ಡನ್)/ ಸಾರ್ವಜನಿಕ ಗ್ರಂಥಾಲಯ:**

ಈ ಮೇಲಿನ ಸೌಲಭ್ಯಗಳು ಹಳ್ಳಿಯ ಒಳಗಿದ್ದರೆ ಕೋಡ್ 00 ಎಂದು, ಇಲ್ಲವಾದರೆ ಸಮೀಪದಲ್ಲಿ ಈ ಸೌಲಭ್ಯ ಇರುವ ಪ್ರದೇಶದಿಂದ ದೂರವನ್ನು ನಮೂದಿಸುವುದು.

ಬ್ಲಾಕ್–2: ಶಿಕ್ಷಣ

**ಒಟ್ಟು ಮಕ್ಕಳ ಸಂಖ್ಯೆ:**

**75. 3+ರಿಂದ 5.10+ ವಯಸ್ಸಿನವರು:** 3 ವರ್ಷದಿಂದ 5 ವರ್ಷ 10 ತಿಂಗಳು ಆಗಿರುವ ಮಕ್ಕಳ/ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**76. 5.10–ರಿಂದ 10+ ವಯಸ್ಸಿನವರು:** 5 ವರ್ಷ 10 ತಿಂಗಳ ನಂತರದ ಆದರೆ 10 ವರ್ಷದ ಒಳಗಡೆ ಇರುವ ಮಕ್ಕಳ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**77. 11+ರಿಂದ 18 ವಯಸ್ಸಿನವರು:** 11 ವರ್ಷದಿಂದ 18 ವರ್ಷ ವಯಸ್ಸಿನ ಮಕ್ಕಳ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**78. ಒಟ್ಟು (3+ ರಿಂದ 18):** 3 ವರ್ಷದಿಂದ 18 ವರ್ಷ ವಯಸ್ಸಿನ ಮಕ್ಕಳ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**79. 3+ ರಿಂದ 5.10+ ವಯಸ್ಸಿನವರು:** 3 ವರ್ಷದಿಂದ 5 ವರ್ಷ 10 ತಿಂಗಳ ವಯಸ್ಸಿನ ಶಾಲೆ ಯಿಂದ ಹೊರಗುಳಿದ ಮಕ್ಕಳ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**ಶಾಲೆಯಿಂದ ಹೊರಗುಳಿದ ಮಕ್ಕಳ ಸಂಖ್ಯೆ:**

**80. 5.10– ರಿಂದ 10+ ವಯಸ್ಸಿನವರು:** 5 ವರ್ಷ 10 ತಿಂಗಳ ನಂತರದ ಆದರೆ 10 ವರ್ಷ ವಯಸ್ಸಿನ ಮಕ್ಕಳ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**81. 11+ ರಿಂದ 18 ವಯಸ್ಸಿನವರು:** 11 ವರ್ಷದಿಂದ 18 ವರ್ಷ ವಯಸ್ಸಿನ ಮಕ್ಕಳ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**82. ಒಟ್ಟು (3+ ರಿಂದ 18):** 3 ವರ್ಷದಿಂದ 18 ವರ್ಷ ವಯಸ್ಸಿನ ಮಕ್ಕಳ ವಿದ್ಯಾರ್ಥಿ, ವಿದ್ಯಾರ್ಥಿನಿಯರ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**ಕಿರಿಯ ಪ್ರಾಥಮಿಕ ಶಾಲೆಗಳ ವಿವರ:**

**83. ಶಾಲೆಗಳ ಸಂಖ್ಯೆ:** ಒಟ್ಟು ಸರ್ಕಾರಿ ಅನುದಾನ, ಅನುದಾನ ರಹಿತ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆಯನ್ನು ಆಯಾ ಕಾಲಂಗಳಲ್ಲಿ ನಮೂದಿಸುವುದು.

**84. ಸ್ವಂತ ಕಟ್ಟಡವಿರುವ ಶಾಲೆಗಳ ಸಂಖ್ಯೆ:** ಒಟ್ಟು ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ 83 ರಲ್ಲಿ ನಮೂದಿಸಿರುವುದರಲ್ಲಿ ಸ್ವಂತ ಕಟ್ಟಡ ಹೊಂದಿರುವ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**85. ಅಡುಗೆ ಮನೆ ಲಭ್ಯವಿರುವ ಶಾಲೆಗಳ ಸಂಖ್ಯೆ:** ಒಟ್ಟು ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ 83ರಲ್ಲಿ ನಮೂದಿಸಿರುವುದರಲ್ಲಿ ಅಡುಗೆ ಮನೆ ಲಭ್ಯವಿರುವ ಶಾಲೆಗಳ ಸಂಖ್ಯೆ ಹಾಗೂ ಇಲ್ಲದಿರುವ ಶಾಲೆಗಳ ಸಂಖ್ಯೆಯನ್ನು, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**86. ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:**

**ವಿದ್ಯುಚ್ಛಕ್ತಿ ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ವಿದ್ಯುಚ್ಛಕ್ತಿ ಹೊಂದಿರುವ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ ನಮೂದಿಸುವುದು. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಆವರಣ ಗೋಡೆ ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಆವರಣ ಗೋಡೆ ಹೊಂದಿರುವ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಆಟದ ಮೈದಾನ ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಆಟದ ಮೈದಾನ ಹೊಂದಿರುವ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಕುಡಿಯುವ ನೀರಿನ ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಕುಡಿಯುವ ನೀರಿನ ವ್ಯವಸ್ಥೆ ಹೊಂದಿರುವ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಶೌಚಾಲಯ(ಬಾಲಕರು) ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಶೌಚಾಲಯ (ಬಾಲಕರು) ಹೊಂದಿರುವ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಶೌಚಾಲಯ(ಬಾಲಕಿಯರು) ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಶೌಚಾಲಯ (ಬಾಲಕಿಯರು) ಹೊಂದಿರುವ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಗ್ರಂಥಾಲಯ ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಗ್ರಂಥಾಲಯ ಹೊಂದಿರುವ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ರ್‍ಯಾಂಪ್ಸ್ ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ರ್‍ಯಾಂಪ್ಸ್ ಹೊಂದಿರುವ ಕಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**87. ಉಪಾಧ್ಯಾಯರು:**

**ಮಂಜೂರಾದ ಹುದ್ದೆಗಳು:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಉಪಾಧ್ಯಾಯರುಗಳ ಮಂಜೂರಾದ ಹುದ್ದೆಗಳು, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಹಾಲಿ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಉಪಾಧ್ಯಾಯರು ಹಾಲಿ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**88. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ:**

**ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಪರಿಶಿಷ್ಠ ಜಾತಿ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಪರಿಶಿಷ್ಠ ಜಾತಿ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**89. ಪರಿಶಿಷ್ಠ ಪಂಗಡ ವಿದ್ಯಾರ್ಥಿಗಳ ಸಂಖ್ಯೆ:**

**ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ (ಬಾಲಕರು) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಪರಿಶಿಷ್ಠ ಪಂಗಡ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಪರಿಶಿಷ್ಠ ಪಂಗಡ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**90. ಇತರೆ ವಿದ್ಯಾರ್ಥಿಗಳ ಸಂಖ್ಯೆ:**

**ಇತರೆ ವಿದ್ಯಾರ್ಥಿಗಳ(ಬಾಲಕರು) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಇತರೆ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಇತರೆ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಇತರೆ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**91. ಎಲ್ಲಾ ವಿದ್ಯಾರ್ಥಿಗಳ ಸಂಖ್ಯೆ:**

**ಎಲ್ಲಾ ವಿದ್ಯಾರ್ಥಿಗಳ(ಬಾಲಕರು) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಎಲ್ಲಾ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಒಟ್ಟು ಎಲ್ಲಾ ವಿದ್ಯಾರ್ಥಿಗಳ (ಬಾಲಕರು, ಬಾಲಕಿಯರು) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**92. ಒಟ್ಟು ವಿಕಲಚೇತನ (ಅಂಗವಿಕಲ) ವಿದ್ಯಾರ್ಥಿಗಳ ಸಂಖ್ಯೆ:**

**ವಿದ್ಯಾರ್ಥಿಗಳ (ಬಾಲಕರು) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟು ಅಂಗವಿಕಲ ವಿದ್ಯಾರ್ಥಿಗಳ (ಬಾಲಕರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟು ಅಂಗವಿಕಲ ವಿದ್ಯಾರ್ಥಿಗಳ (ಬಾಲಕಿಯರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಮಧ್ಯಾಹ್ನದ ಉಪಹಾರ ಯೋಜನೆ:**

**93. ಎಲ್ಲಾ ವಿದ್ಯಾರ್ಥಿಗಳ ಸಂಖ್ಯೆ:**

**ಎಲ್ಲಾ ವಿದ್ಯಾರ್ಥಿಗಳ (ಬಾಲಕರು) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಎಲ್ಲಾ ವಿದ್ಯಾರ್ಥಿಗಳ (ಬಾಲಕರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಎಲ್ಲಾ ವಿದ್ಯಾರ್ಥಿಗಳ (ಬಾಲಕಿಯರು) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಎಲ್ಲಾ ವಿದ್ಯಾರ್ಥಿಗಳ (ಬಾಲಕಿಯರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಒಟ್ಟು ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು, ಬಾಲಕಿಯರು):** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**94. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ:**

**ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಜಾತಿ (ಬಾಲಕರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ (ಬಾಲಕಿಯರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**95. ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ:**

**ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ(ಬಾಲಕರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ:** ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಹಿರಿಯ ಪ್ರಾಥಮಿಕ ಶಾಲೆಗಳ ವಿವರ:**

**96. ಒಟ್ಟು ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ:** ಗ್ರಾಮದಲ್ಲಿನ ಒಟ್ಟು ಸರ್ಕಾರಿ ಅನುದಾನ, ಅನುದಾನರಹಿತ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**97. ಸ್ವಂತ ಕಟ್ಟಡವಿರುವ ಶಾಲೆಗಳ ಸಂಖ್ಯೆ:** ಗ್ರಾಮದಲ್ಲಿ ಒಟ್ಟು ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ 96 ರಲ್ಲಿ ನಮೂದಿಸಿರುವುದರಲ್ಲಿ ಸ್ವಂತ ಕಟ್ಟಡ ಹೊಂದಿರುವ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**98. ಅಡುಗೆ ಮನೆ ಲಭ್ಯವಿರುವ ಶಾಲೆಗಳ ಸಂಖ್ಯೆ:** ಒಟ್ಟು ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ 96 ರಲ್ಲಿ ನಮೂದಿಸಿರುವುದರಲ್ಲಿ ಹಾಲಿ ಇರುವ ಹಾಗೂ ಇಲ್ಲದಿರುವ ಅಡುಗೆ ಮನೆ ಶಾಲೆಗಳ ಸಂಖ್ಯೆ ನಮೂದಿಸುವುದು. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**99. ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:**

**ವಿದ್ಯುಚ್ಛಕ್ತಿ ಲಭ್ಯವಿರುವ ಶಾಲೆಗಳ ಸಂಖ್ಯೆ:** ವಿದ್ಯುಚ್ಛಕ್ತಿ ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ ನಮೂದಿಸುವುದು. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಆವರಣ ಗೋಡೆ ಲಭ್ಯವಿರುವ ಶಾಲೆಗಳ ಸಂಖ್ಯೆ:** ಆವರಣ ಗೋಡೆ ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಆಟದ ಮೈದಾನ ಲಭ್ಯವಿರುವ ಶಾಲೆಗಳ ಸಂಖ್ಯೆ:** ಆಟದ ಮೈದಾನ, ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಕುಡಿಯುವ ನೀರಿನ ಸೌಲಭ್ಯವಿರುವ ಶಾಲೆಗಳ ಸಂಖ್ಯೆ:** ಕುಡಿಯುವ ನೀರಿನ ವ್ಯವಸ್ಥೆ ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಶೌಚಾಲಯ(ಬಾಲಕರ) ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಶೌಚಾಲಯ (ಬಾಲಕರು) ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಶೌಚಾಲಯ(ಬಾಲಕಿಯರ) ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಶೌಚಾಲಯ (ಬಾಲಕಿಯರು) ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಗ್ರಂಥಾಲಯ ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ಗ್ರಂಥಾಲಯ ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ರ್‍ಯಾಂಪ್ಸ್ ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:** ರ್‍ಯಾಂಪ್ಸ್ ಹೊಂದಿರುವ ಹಿರಿಯ ಪ್ರಾಥಮಿಕ ಶಾಲೆಗಳ ಸಂಖ್ಯೆ ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**100. ಉಪಾಧ್ಯಾಯರು:**

**ಮಂಜೂರಾದ ಹುದ್ದೆಗಳು:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಉಪಾಧ್ಯಾಯರುಗಳ ಮಂಜೂರಾದ ಹುದ್ದೆಗಳು, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಹಾಲಿ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಉಪಾಧ್ಯಾಯರು ಹಾಲಿ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**101. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ:**

**ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಪರಿಶಿಷ್ಠ ಜಾತಿ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಪರಿಶಿಷ್ಠ ಜಾತಿ ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**102. ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ:**

**ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**103. ಇತರೆ ವಿದ್ಯಾರ್ಥಿಗಳ ಸಂಖ್ಯೆ:**

**ಇತರೆ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಇತರೆ ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಇತರೆ ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಇತರೆ ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**104. ಒಟ್ಟು ವಿದ್ಯಾರ್ಥಿಗಳ ಸಂಖ್ಯೆ:**

**ವಿದ್ಯಾರ್ಥಿಗಳ(ಬಾಲಕರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳ(ಬಾಲಕರ)ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳ(ಬಾಲಕಿಯರ) ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**105. ಒಟ್ಟು ವಿಕಲಚೇತನ (ಅಂಗವಿಕಲ) ವಿದ್ಯಾರ್ಥಿಗಳ ಸಂಖ್ಯೆ:**

**ವಿದ್ಯಾರ್ಥಿಗಳ (ಬಾಲಕರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟು ಅಂಗವಿಕಲ ವಿದ್ಯಾರ್ಥಿಗಳ (ಬಾಲಕರ) ಸಂಖ್ಯೆ, ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಒಟ್ಟು ಅಂಗವಿಕಲ ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ ಹಾಗೂ ಒಟ್ಟು ವಿದ್ಯಾರ್ಥಿಗಳ ಬಾಲಕರು, ಬಾಲಕಿಯರ ಸಂಖ್ಯೆ ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಮಧ್ಯಾಹ್ನದ ಉಪಹಾರ ಯೋಜನೆ:**

**106. ಒಟ್ಟು ವಿದ್ಯಾರ್ಥಿಗಳ ಸಂಖ್ಯೆ:**

**ವಿದ್ಯಾರ್ಥಿಗಳ (ಬಾಲಕರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಎಲ್ಲಾ ವಿದ್ಯಾರ್ಥಿಗಳ (ಬಾಲಕರ) ಸಂಖ್ಯೆ, ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಎಲ್ಲಾ (ಬಾಲಕಿಯರ) ಸಂಖ್ಯೆ, ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಒಟ್ಟು ವಿದ್ಯಾರ್ಥಿಗಳ ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ, ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**107. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ:**

**ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ (ಬಾಲಕರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಜಾತಿ (ಬಾಲಕರ) ಸಂಖ್ಯೆ, ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಜಾತಿ (ಬಾಲಕಿಯರ) ಸಂಖ್ಯೆ, ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**108. ಪರಿಶಿಷ್ಟ ಪಂಗಡ ಸಂಖ್ಯೆ:**

**ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ (ಬಾಲಕರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಪಂಗಡ (ಬಾಲಕರ) ಸಂಖ್ಯೆ, ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ (ಬಾಲಕಿಯರ) ಸಂಖ್ಯೆ:** ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಪಂಗಡ (ಬಾಲಕಿಯರ) ಸಂಖ್ಯೆ, ಸರ್ಕಾರಿ ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಪ್ರೌಢ ಶಾಲೆಗಳ ವಿವರ:**

**109. ಒಟ್ಟು ಪ್ರೌಢ ಶಾಲೆಗಳ ಸಂಖ್ಯೆ:** ಗ್ರಾಮದಲ್ಲಿನ ಒಟ್ಟು ಪ್ರೌಢ ಶಾಲೆಗಳ ವಿವರವನ್ನು ಸರ್ಕಾರಿ, ಅನುದಾನ, ಅನುದಾನರಹಿತ ಸಂಖ್ಯೆಯನ್ನು ಪ್ರತ್ಯೇಕವಾಗಿ ನಮೂದಿಸುವುದು.

**110. ಸ್ವಂತ ಕಟ್ಟಡವಿರುವ ಶಾಲೆಗಳ ಸಂಖ್ಯೆ:** ಒಟ್ಟು ಪ್ರೌಢ ಶಾಲೆಗಳ ಸಂಖ್ಯೆ 109 ರಲ್ಲಿ ನಮೂದಿಸಿರುವುದರಲ್ಲಿ ಸ್ವಂತ ಕಟ್ಟಡ ಹೊಂದಿರುವ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**111. ಅಡುಗೆ ಮನೆ ಲಭ್ಯವಿರುವ ಶಾಲೆಗಳ ಸಂಖ್ಯೆ:** ಒಟ್ಟು ಪ್ರೌಢ ಶಾಲೆಗಳ ಸಂಖ್ಯೆ 109 ರಲ್ಲಿ ನಮೂದಿಸಿರುವುದರಲ್ಲಿ ಹಾಲಿ ಇರುವ ಹಾಗೂ ಇಲ್ಲದಿರುವ ಅಡುಗೆ ಮನೆ ಶಾಲೆಗಳ ಸಂಖ್ಯೆ ನಮೂದಿಸುವುದು. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**112. ಸೌಲಭ್ಯ ಹೊಂದಿರುವ ಶಾಲೆಗಳ ಸಂಖ್ಯೆ:**

**ವಿದ್ಯುಚ್ಛಕ್ತಿ ಲಭ್ಯವಿರುವ ಶಾಲೆಗಳ ಸಂಖ್ಯೆ:** ವಿದ್ಯುಚ್ಛಕ್ತಿ ಹೊಂದಿರುವ ಪ್ರೌಢ ಶಾಲೆಗಳ ಸಂಖ್ಯೆ ನಮೂದಿಸುವುದು. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಆವರಣ ಗೋಡೆ:** ಆವರಣ ಗೋಡೆ ಹೊಂದಿರುವ ಪ್ರೌಢ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಆಟದ ಮೈದಾನ:** ಆಟದ ಮೈದಾನ ಹೊಂದಿರುವ ಪ್ರೌಢ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಕುಡಿಯುವ ನೀರಿನ ವ್ಯವಸ್ಥೆ:** ಕುಡಿಯುವ ನೀರಿನ ವ್ಯವಸ್ಥೆ ಹೊಂದಿರುವ ಪ್ರೌಢ ಶಾಲೆಗಳ ಸಂಖ್ಯೆ ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಶೌಚಾಲಯ– ಬಾಲಕರು** : ಶೌಚಾಲಯ (ಬಾಲಕರು) ಹೊಂದಿರುವ ಪ್ರೌಢ ಶಾಲೆಗಳ ಸಂಖ್ಯೆ. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಶೌಚಾಲಯ– ಬಾಲಕಿಯರು :** ಶೌಚಾಲಯ (ಬಾಲಕಿಯರು) ಹೊಂದಿರುವ ಪ್ರೌಢ ಶಾಲೆಗಳ ಸಂಖ್ಯೆ. ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಗ್ರಂಥಾಲಯ:** ಗ್ರಂಥಾಲಯ ಹೊಂದಿರುವ ಪ್ರೌಢ ಶಾಲೆಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ರ್‍ಯಾಂಪ್ಸ್:** ರ್‍ಯಾಂಪ್ಸ್ ಹೊಂದಿರುವ ಪ್ರೌಢ ಶಾಲೆಗಳ ಸಂಖ್ಯೆ ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**113. ಉಪಾಧ್ಯಾಯರು**

**ಮಂಜೂರಾದ ಹುದ್ದೆಗಳು:** ಪ್ರೌಢ ಶಾಲೆಯಲ್ಲಿ ಉಪಾಧ್ಯಾಯರುಗಳ ಮಂಜೂರಾದ ಹುದ್ದೆಗಳು, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಹಾಲಿ ಕಾರ್ಯನಿರ್ವಹಿಸುತ್ತಿರುವವರ ಸಂಖ್ಯೆ :** ಪ್ರೌಢ ಶಾಲೆಯಲ್ಲಿ ಉಪಾಧ್ಯಾಯರು ಹಾಲಿ ಕಾರ್ಯ ನಿರ್ವಹಿಸುತ್ತಿರುವವರ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**114. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಪ್ರೌಢ ಶಾಲೆಯಲ್ಲಿ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:** ಪ್ರೌಢ ಶಾಲೆಯಲ್ಲಿ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**115. ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಪ್ರೌಢ ಶಾಲೆಯಲ್ಲಿ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:** ಪ್ರೌಢ ಶಾಲೆಯಲ್ಲಿ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**116. ಇತರ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಪ್ರೌಢ ಶಾಲೆಯಲ್ಲಿ ಇತರೆ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:** ಪ್ರೌಢ ಶಾಲೆಯಲ್ಲಿ ಇತರೆ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**117. ಒಟ್ಟು ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಪ್ರೌಢ ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:** ಪ್ರೌಢ ಶಾಲೆಯಲ್ಲಿ ಎಲ್ಲಾ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಒಟ್ಟು:** ಪ್ರೌಢ ಶಾಲೆಯಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**118. ಒಟ್ಟು ವಿಕಲಚೇತನ (ಅಂಗವಿಕಲ) ವಿದ್ಯಾರ್ಥಿಗಳ ಸಂಖ್ಯೆ:**

ಪ್ರೌಢ ಶಾಲೆಯಲ್ಲಿ ಒಟ್ಟು ಅಂಗವಿಕಲ ವಿದ್ಯಾರ್ಥಿಗಳ (ಬಾಲಕರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:** ಪ್ರೌಢ ಶಾಲೆಯಲ್ಲಿ ಒಟ್ಟು ಅಂಗವಿಕಲ ವಿದ್ಯಾರ್ಥಿಗಳ (ಬಾಲಕಿಯರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಮಧ್ಯಾಹ್ನದ ಉಪಹಾರ ಯೋಜನೆ:**

**119. ಎಲ್ಲಾ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಪ್ರೌಢ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಎಲ್ಲಾ ವಿದ್ಯಾರ್ಥಿಗಳ (ಬಾಲಕರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:** ಪ್ರೌಢ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಎಲ್ಲಾ (ಬಾಲಕಿಯರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಒಟ್ಟು:** ಪ್ರೌಢ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**120. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ :**

ಪ್ರೌಢ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಜಾತಿ (ಬಾಲಕರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

ಪ್ರೌಢ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಜಾತಿ (ಬಾಲಕಿಯರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**121. ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಪ್ರೌಢ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಪಂಗಡ (ಬಾಲಕರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:**ಪ್ರೌಢ ಶಾಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆ ಪಡೆದ ಪರಿಶಿಷ್ಟ ಪಂಗಡ (ಬಾಲಕಿಯರು) ಸಂಖ್ಯೆ, ಸರ್ಕಾರಿ, ಅನುದಾನ, ಅನುದಾನರಹಿತ ಪ್ರತ್ಯೇಕವಾಗಿ ನಮೂದಿಸುವುದು.

**ಉಚಿತ ಬೈಸಿಕಲ್ (8ನೇ ತರಗತಿ ವಿದ್ಯಾರ್ಥಿಗಳಿಗೆ):**

**122. ಒಟ್ಟು ವಿದ್ಯಾರ್ಥಿಗಳ ಸಂಖ್ಯೆ :**

ಪ್ರೌಢ ಶಾಲೆಯಲ್ಲಿ ಉಚಿತ ಬೈಸಿಕಲ್ (8ನೇ ತರಗತಿ ವಿದ್ಯಾರ್ಥಿಗಳಿಗೆ) ಪಡೆದ ಎಲ್ಲಾ ವಿದ್ಯಾರ್ಥಿಗಳ ಸಂಖ್ಯೆ, ಸರ್ಕಾರಿ, ಅನುದಾನ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕರು:** ಪ್ರೌಢ ಶಾಲೆಯಲ್ಲಿ ಉಚಿತ ಬೈಸಿಕಲ್ (8ನೇ ತರಗತಿ ವಿದ್ಯಾರ್ಥಿಗಳಿಗೆ) ಪಡೆದವರ ಸಂಖ್ಯೆ, (ಬಾಲಕರು) ಸರ್ಕಾರಿ, ಅನುದಾನ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:** ಪ್ರೌಢ ಶಾಲೆಯಲ್ಲಿ ಉಚಿತ ಬೈಸಿಕಲ್ (8ನೇ ತರಗತಿ ವಿದ್ಯಾರ್ಥಿಗಳಿಗೆ) ಪಡೆದವರ ಸಂಖ್ಯೆ, (ಬಾಲಕಿಯರು) ಸರ್ಕಾರಿ, ಅನುದಾನ ಪ್ರತ್ಯೇಕವಾಗಿ ನಮೂದಿಸುವುದು.

**123. ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಪ್ರೌಢ ಶಾಲೆಯಲ್ಲಿ ಉಚಿತ ಬೈಸಿಕಲ್ (8ನೇ ತರಗತಿ ವಿದ್ಯಾರ್ಥಿಗಳಿಗೆ) ಪಡೆದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:**ಪ್ರೌಢ ಶಾಲೆಯಲ್ಲಿ ಉಚಿತ ಬೈಸಿಕಲ್ (8ನೇ ತರಗತಿ ವಿದ್ಯಾರ್ಥಿಗಳಿಗೆ) ಪಡೆದ ಪರಿಶಿಷ್ಟ ಜಾತಿ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ ಪ್ರತ್ಯೇಕವಾಗಿ ನಮೂದಿಸುವುದು.

**124. ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಪ್ರೌಢ ಶಾಲೆಯಲ್ಲಿ ಉಚಿತ ಬೈಸಿಕಲ್ (8ನೇ ತರಗತಿ ವಿದ್ಯಾರ್ಥಿಗಳಿಗೆ) ಪಡೆದ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ಸರ್ಕಾರಿ, ಅನುದಾನ ಪ್ರತ್ಯೇಕವಾಗಿ ನಮೂದಿಸುವುದು.

**ಬಾಲಕಿಯರು:** ಪ್ರೌಢ ಶಾಲೆಯಲ್ಲಿ ಉಚಿತ ಬೈಸಿಕಲ್ (8ನೇ ತರಗತಿ ವಿದ್ಯಾರ್ಥಿಗಳಿಗೆ) ಪಡೆದ ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ಸರ್ಕಾರಿ, ಅನುದಾನ ಪ್ರತ್ಯೇಕವಾಗಿ ನಮೂದಿಸುವುದು.

**125. ಆಶ್ರಮ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಆಶ್ರಮ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ನಮೂದಿಸುವುದು.

**ಬಾಲಕಿಯರು:** ಆಶ್ರಮ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ನಮೂದಿಸುವುದು.

**126. ಕಸ್ತೂರಿಬಾ ಗಾಂಧಿ ಬಾಲಿಕಾ ಆಶ್ರಮ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಕಸ್ತೂರಿಬಾ ಗಾಂಧಿ ಬಾಲಿಕಾ ಆಶ್ರಮ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ನಮೂದಿಸುವುದು.

**ಬಾಲಕಿಯರು:** ಕಸ್ತೂರಿಬಾ ಗಾಂಧಿ ಬಾಲಿಕಾ ಆಶ್ರಮ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ ನಮೂದಿಸುವುದು.

**127. ಮೊರಾರ್ಜಿ ದೇಸಾಯಿ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಮೊರಾರ್ಜಿ ದೇಸಾಯಿ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ನಮೂದಿಸುವುದು.

**ಬಾಲಕಿಯರು:** ಮೊರಾರ್ಜಿ ದೇಸಾಯಿ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ನಮೂದಿಸುವುದು.

**128. ನವೋದಯ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ನವೋದಯ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ನಮೂದಿಸುವುದು.

**ಬಾಲಕಿಯರು:** ನವೋದಯ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ನಮೂದಿಸುವುದು.

**129. ಕಿತ್ತೂರು ರಾಣಿ ಚೆನ್ನಮ್ಮ ಬಾಲಿಕಾ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ:**

**ಬಾಲಕರು:** ಕಿತ್ತೂರು ರಾಣಿ ಚೆನ್ನಮ್ಮ ಬಾಲಿಕಾ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ನಮೂದಿಸುವುದು.

**ಬಾಲಕಿಯರು:** ಕಿತ್ತೂರು ರಾಣಿ ಚೆನ್ನಮ್ಮ ಬಾಲಿಕಾ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ನಮೂದಿಸುವುದು.

**130. ಕೇಂದ್ರೀಯ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ :**

**ಬಾಲಕರು:** ಕೇಂದ್ರೀಯ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕರು) ನಮೂದಿಸುವುದು.

**ಬಾಲಕಿಯರು:**ಕೇಂದ್ರೀಯ ಶಾಲೆಗಳಲ್ಲಿಯ ವಿದ್ಯಾರ್ಥಿಗಳ ಸಂಖ್ಯೆ (ಬಾಲಕಿಯರು) ನಮೂದಿಸುವುದು.

## ಬ್ಲಾಕ್–3: ಆರೋಗ್ಯ

ಸರ್ಕಾರಿ ಸೌಲಭ್ಯಗಳು:

**ಆರೋಗ್ಯ ಸಂಸ್ಥೆಗಳು:**

**131. ಸಮುದಾಯ ಆರೋಗ್ಯ ಕೇಂದ್ರ :** ಸಮುದಾಯ ಆರೋಗ್ಯ ಕೇಂದ್ರ ಗ್ರಾಮದಲ್ಲಿ ಇದ್ದರೆ 00 ಎಂತಲೂ, ಇಲ್ಲದಿದ್ದರೆ ಗ್ರಾಮಕ್ಕೆ ಸಮುದಾಯ ಆರೋಗ್ಯ ಕೇಂದ್ರ ಇರುವ ಗ್ರಾಮ/ನಗರಕ್ಕೆ ಇರುವ ದೂರವನ್ನು ಕಿ.ಮೀ.ಗಳಲ್ಲಿ ನಮೂದಿಸುವುದು.

**132. ಎಫ್.ಆರ್.ಯು. ಸಮುದಾಯ ಆರೋಗ್ಯ ಕೇಂದ್ರ :** ಎಫ್.ಆರ್.ಯು. ಸಮುದಾಯ ಆರೋಗ್ಯ ಕೇಂದ್ರ ಅಂದರೆ ಫಸ್ಟ್ ರೆಫರಲ್ ಯೂನಿಟ್ ಹೊಂದಿರುವ ಸಮುದಾಯ ಆರೋಗ್ಯ ಕೇಂದ್ರ ಗ್ರಾಮದಲ್ಲಿ ಇದ್ದರೆ 00 ಎಂತಲೂ, ಇಲ್ಲದಿದ್ದರೆ ಎಫ್.ಆರ್.ಯು. ಸಮುದಾಯ ಆರೋಗ್ಯ ಕೇಂದ್ರ ಇರುವ ಹತ್ತಿರದ ಗ್ರಾಮ/ನಗರಕ್ಕೆ ಇರುವ ದೂರವನ್ನು ಕಿ.ಮೀ.ಗಳಲ್ಲಿ ನಮೂದಿಸುವುದು.

**133. ಪ್ರಾಥಮಿಕ ಆರೋಗ್ಯ ಕೇಂದ್ರ :** ಪ್ರಾಥಮಿಕ ಆರೋಗ್ಯ ಕೇಂದ್ರ ಗ್ರಾಮದಲ್ಲಿ ಇದ್ದರೆ 00 ಎಂತಲೂ, ಇಲ್ಲದಿದ್ದರೆ ಗ್ರಾಮಕ್ಕೆ ಪ್ರಾಥಮಿಕ ಆರೋಗ್ಯ ಕೇಂದ್ರ ಹತ್ತಿರ ಇರುವ ಗ್ರಾಮ/ನಗರಕ್ಕೆ ಇರುವ ದೂರವನ್ನು ಕಿ.ಮೀ.ಗಳಲ್ಲಿ ನಮೂದಿಸುವುದು.

134. **24 X 7 ಪ್ರಾಥಮಿಕ ಆರೋಗ್ಯ ಕೇಂದ್ರ :** 24 X 7 ಪ್ರಾಥಮಿಕ ಆರೋಗ್ಯ ಕೇಂದ್ರ ಇತ್ತೀಚೆಗೆ ರಾಜ್ಯದ ಕೆಲವು ಪ್ರಾಥಮಿಕ ಆರೋಗ್ಯ ಕೇಂದ್ರಗಳು ದಿವಸದ 24 ಗಂಟೆಗಳೂ ಕಾರ್ಯ ನಿರ್ವಹಿಸುತ್ತಿವೆ. ಅಂತಹ ಪ್ರಾಥಮಿಕ ಆರೋಗ್ಯ ಕೇಂದ್ರ ಗ್ರಾಮದಲ್ಲಿದ್ದರೆ 00 ಎಂತಲೂ, ಇಲ್ಲದಿದ್ದರೆ ಅಂತಹ ಪ್ರಾಥಮಿಕ ಆರೋಗ್ಯ ಕೇಂದ್ರ ಇರುವ ಗ್ರಾಮ/ನಗರಕ್ಕೆ ಇರುವ ದೂರವನ್ನು ಕಿ.ಮೀ.ಗಳಲ್ಲಿ ನಮೂದಿಸುವುದು.

**135. ಆರೋಗ್ಯ ಉಪಕೇಂದ್ರ :** ಕೆಲವು ಗ್ರಾಮಗಳಲ್ಲಿ ಎ.ಎನ್.ಎಂ. ಸಬ್ ಸೆಂಟರ್ಸ್ ಕಾರ್ಯ ನಿರ್ವಹಿಸುತ್ತಿದ್ದು ಅಂತಹ ಉಪಕೇಂದ್ರ ಗ್ರಾಮದಲ್ಲಿದ್ದರೆ 00 ಎಂತಲೂ, ಇಲ್ಲದಿದ್ದರೆ ಅಂತಹ ಕೇಂದ್ರ ಇರುವ ಗ್ರಾಮ/ನಗರಕ್ಕೆ ಇರುವ ದೂರವನ್ನು ಕಿ.ಮೀ. ಗಳಲ್ಲಿ ನಮೂದಿಸುವುದು.

ಸ್ವಂತ ಕಟ್ಟಡ ಹೊಂದಿರುವ ಸಂಸ್ಥೆಗಳು :

**136/ 137/ 138/139. ಸಮುದಾಯ ಆರೋಗ್ಯ ಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ, 24 ಘ 7 ಪ್ರಾಥಮಿಕ ಆರೋಗ್ಯ ಕೇಂದ್ರ, ಆರೋಗ್ಯ ಉಪಕೇಂದ್ರ :** ಇವುಗಳು ಸರ್ಕಾರದ ಕಟ್ಟಡದಲ್ಲಿ ಕೆಲಸ ನಿರ್ವಹಿಸುತ್ತಿದ್ದರೆ ಸಂಕೇತ–1 ಎಂತಲೂ, ಇನ್ನಿತರೇ ಯಾವುದೇ ರೀತಿ ಕಟ್ಟಡದಲ್ಲಿ ಕೆಲಸ ನಿರ್ವಹಿಸುತ್ತಿದ್ದರೆ ಸಂಕೇತ–2 ಎಂತಲೂ ನಮೂದಿಸುವುದು.

**ಒದಗಿಸಿರುವ ಸೌಲಭ್ಯಗಳು :**

**140/141/142/143/144/145/146/147:** ಆಂಬುಲೆನ್ಸ್, ದೂರವಾಣಿ, ರಕ್ತಭಂಡಾರ, ಪ್ರಯೋಗಾಲಯ, ಶೌಚಾಲಯ, ಕುಡಿಯುವ ನೀರು, ಶಸ್ತ್ರ ಚಿಕಿತ್ಸಾ ಕೊಠಡಿ, ಹೆರಿಗೆ ಕೊಠಡಿ ಸೌಲಭ್ಯಗಳನ್ನು ಹೊಂದಿದ್ದಲ್ಲಿ ಅವುಗಳ ಎದುರಿಗೆ ಸಂಕೇತ –1 ಎಂತಲೂ, ಇಲ್ಲದಿದ್ದರೆ ಸಂಕೇತ–2 ಎಂತಲೂ ನಮೂದಿಸುವುದು.

**148. ಹಾಸಿಗೆಗಳ ಸಂಖ್ಯೆ :** ಮಂಜೂರಾದ ಹಾಸಿಗೆಗಳ ಸಂಖ್ಯೆಯನ್ನು ನಮೂದಿಸುವುದು.

**149. ಔಷಧಾಲಯಗಳು :** ಮೇಲೆ ನಮೂದಿಸಿದ ಸರ್ಕಾರಿ ಆರೋಗ್ಯ ಕೇಂದ್ರಗಳಲ್ಲಿ ಔಷಧಾಲಯಗಳು ಇದ್ದರೆ ಸಂಕೇತ–1 ಎಂತಲೂ, ಇಲ್ಲದಿದ್ದರೆ ಸಂಕೇತ–2 ಎಂತಲೂ ನಮೂದಿಸುವುದು.

| ಬ್ಲಾಕ್–21: ಯುವಜನ ಸೇವೆ ಮತ್ತು ಕ್ರೀಡೆ | | | |
|---|---|---|---|
| ಸಂಘಗಳು | 544 | ಯುವಕ | |
| | | ಯುವತಿ | |
| ಕ್ರೀಡಾಪಟುಗಳು | 545 | ತಾಲ್ಲೂಕಮಟ್ಟ | |
| | | ಜಿಲ್ಲಾಮಟ್ಟ | |
| | | ರಾಜ್ಯಮಟ್ಟ | |
| | | ರಾಷ್ಟ್ರಮಟ್ಟ | |
| | | ಅಂತರಾಷ್ಟ್ರೀಯಮಟ್ಟ | |
| ಯುವ ಪ್ರಶಸ್ತಿ ಪಡೆದವರು | 546 | ಜಿಲ್ಲಾಮಟ್ಟ | |
| | | ರಾಜ್ಯಮಟ್ಟ | |
| | | ರಾಷ್ಟ್ರಮಟ್ಟ | |

P.R. 227

ಎಸ್.ವಿ.ರಂಗನಾಥ್

**ಸರ್ಕಾರದ ಮುಖ್ಯ ಕಾರ್ಯದರ್ಶಿಗಳು**

## Commerce & Industries Secretariat

**Sub :** Approval to the Project Proposal of M/s. Sical Multimodal and Rail Transport Ltd., to establish "Inland Container Depot" at Kacharakanahalli Village, Hoskote Taluk, Bangalore Rural District.

**Read :** Proceedings of the 24th State High Level Clearance Committee (SHLCC) Meeting held on 24-01-2011.

**Preamble :**

M/s. Sical Multimodal and Rail Transport Ltd., proposes to establish "Inland Container Depot" at Kacharakanahalli Village, Hoskote Taluk, Bangalore Rural District, with an investment of Rs. 95.60 Crores, generating employment to about 124 persons.

In the 24th State High Level Clearance Committee (SHLCC) Meeting held on 24-01-2011, the proposal of the Company was discussed and approved.

Government has examined the recommendations made by the State High Level Clearance Committee in the 24th Meeting held on 24-01-2011, in all aspects.

Hence the following order.

**Government Order No : CI 81 SPI 2011, Bangalore Dated : 25-02-2011**

Government is pleased to accord in principle approval to the Project Proposal of M/s. Sical Multimodal and Rail Transport Ltd., to establish "Inland Container Depot" at Kacharakanahalli Village, Hoskote Taluk, Bangalore Rural District, with an investment of Rs. 95.60 Crores, generating employment to about 124 persons and extend the following infrastructure facilities, incentives and concessions.

**INFRASTRUCTURE FACILITIES :**

1. **Land :** 66 acres at sy. Nos. 77/2, 75/3, 82/1, 75/1, 84/2, 85/2, 85/4, 80, 84/3, 84/1, 75/2, 45/2, 78/2,78/1, 46,47,83/2(P), 81,83/1(P) 77/1, 79/1, 89/3, 89/1, 87/1(P), 88/1, 63, 77/1,92P, 93P, 85/1 & 85/3 of Kacharakanahalli Village, Hoskote Taluk, Bangalore Rural District (including already purchased land of 30.35 acres) to be purchased excluding Government Land U/s 109 KLR Act.
2. **Water :** 20 KLPD from own source.
3. **Power :** 100 KVA to be serviced by BESCOM
4. **Incentives & Concessions** As per applicable Industrial Policy of the State.

**General Terms and Conditions :**

1. **Environment :** The promoters to obtain CFE and CFO from KSPCB and environmental clearance from MOEF, GOI.
2. **Employment :** The Company shall prepare a plan for development of Human Resources required for the Project, train local people and provide employment to these trained local youth and comply with the provisions of Industrial Policy of Govt. of Karnataka. A copy of Human Resources Development plan shall be sent to the Commissioner for I.D. & Director of Industries and Commerce for monitoring.

3. **Vendor Development :** Wherever there is scope for vendor development for the project, the company shall prepare a vendor development plan, develop local vendors and procure the required inputs, components and sub-assemblies from these local vendor units. A copy of the vendor development plan shall be sent to the Commissioner for I.D., & Director of Industries and Commerce for monitoring.
4. **Social Infrastructure Development :** The Company is advised to take up social infrastructure development projects in the vicinity of the proposed location of the unit. A copy of such projects shall be sent to the Commissioner for I.D. & Director of Industries and Commerce for monitoring.
5. **Others :**
   a. The project proponents shall adopt rainwater harvesting, waste water recycling and water conservation techniques. Zero discharge facility should be adopted wherever applicable.
   b. The promoters shall take all statutory and other necessary clearance from the competent authorities including GOI and shall submit milestones/progress in implementation of the project regularly which will be monitored by the Department.

This approval is valid for a period of two years from the date of issue.

By Order and in the name of the Governor of Karnataka

**Srinivasa Dikshit**
Desk Officer (Technical Cell)
Commerce & Industries Department.

P.R. No. 686

**ಕಂದಾಯ ಸಚಿವಾಲಯ**

**ವಿಷಯ :** ಬೆಂಗಳೂರು ನಗರ ಓ.ಟಿ.ಸಿ. ರಸ್ತೆಯಲ್ಲಿರುವ ಶ್ರೀ ಮಹಿಷಮರ್ದಿನಿ ದೇವಾಲಯವನ್ನು ಶ್ರೀ ಕಾಳಿಕಾಂಬ ಕಮಟೇಶ್ವರ ಸ್ವಾಮಿ ದೇವಾಲಯದ ಸಮೂಹ ದೇವಾಲಯ ಎಂದು ಪ್ರಕಟಿಸುವ ಬಗ್ಗೆ.

**ಓದಲಾಗಿದೆ :** 1. ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ : ಎಡಿಎಂ 8 ಸಿಆರ್ 119/2005-06 ದಿನಾಂಕ : 12-01-2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಬೆಂಗಳೂರು ನಗರ ಓ.ಟಿ.ಸಿ. ರಸ್ತೆಯಲ್ಲಿರುವ ಶ್ರೀ ಕಾಳಿಕಾಂಬ ಕಮಟೇಶ್ವರಸ್ವಾಮಿ ದೇವಾಲಯ ಮತ್ತು ಶ್ರೀ ಮಹಿಷಮರ್ದಿನಿ ದೇವಾಲಯವು ಪ್ರವರ್ಗ 'ಬಿ' ಅಧಿಸೂಚಿತ ಸಂಸ್ಥೆಗಳಾಗಿದ್ದು, ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 77 ಎಂಇಡಿ 2003 ದಿನಾಂಕ : 30-04-2003 ರಂತೆ ಕ್ರಮ ಸಂಖ್ಯೆ : 33ರಲ್ಲಿ ಶ್ರೀ ಕಾಳಿಕಾಂಬ ಕಮಟೇಶ್ವರಸ್ವಾಮಿ ದೇವಾಲಯ ಹಾಗೂ ಕ್ರಮ ಸಂಖ್ಯೆ : 48ರಲ್ಲಿ ಶ್ರೀ ಮಹಿಷಮರ್ದಿನಿ ದೇವಾಲಯ ಎಂದು ಪ್ರತ್ಯೇಕವಾಗಿ ಪ್ರಕಟಿಸಿರುವುದನ್ನು ಮಾರ್ಪಡಿಸಿ ಶ್ರೀ ಮಹಿಷಮರ್ದಿನಿ ದೇವಾಲಯವು ಶ್ರೀ ಕಾಳಿಕಾಂಬ ಕಮಟೇಶ್ವರ ಸ್ವಾಮಿ ದೇವಾಲಯದ ಸಮೂಹ ದೇವಾಲಯವೆಂದು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಲ್ಲಿ ಪ್ರಕಟಿಸಿ ಆದೇಶ ಹೊರಡಿಸುವಂತೆ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರು ಧಾರ್ಮಿಕ ದತ್ತಿ ಇಲಾಖೆರವರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 07 ಮುಆಬಿ 2011, ಬೆಂಗಳೂರು, ದಿನಾಂಕ : 8ನೇ ಮಾರ್ಚ್ 2011**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ ಓ.ಟಿ.ಸಿ. ರಸ್ತೆಯಲ್ಲಿರುವ ಅಧಿಸೂಚಿತ ಸಂಸ್ಥೆಗಳ ಪಟ್ಟಿಯ ಕ್ರಮ ಸಂಖ್ಯೆ : 48 ರಲ್ಲಿನ ಶ್ರೀ ಮಹಿಷಮರ್ದಿನಿ ದೇವಾಲಯವನ್ನು ರದ್ದುಪಡಿಸಿ, ಸದರಿ ದೇವಸ್ಥಾನವನ್ನು ದಿನಾಂಕ : 30-04-2003ರ ಸರ್ಕಾರದ ಅಧಿಸೂಚನೆಯ ಸಂಖ್ಯೆ : ಕಂಇ 77 ಎಂಇಟಿ 2003ರಲ್ಲಿ ಪ್ರಕಟಿಸಲಾದ ಬೆಂಗಳೂರು ನಗರಸಭಾ ವಲಯದ ಅಧಿಸೂಚಿತ ಸಂಸ್ಥೆಗಳ ಕ್ರಮ ಸಂಖ್ಯೆ : 33 ರಲ್ಲಿ ಶ್ರಿ ಕಾಳಿಕಾಂಬ ಕಮಟೇಶ್ವರಸ್ವಾಮಿ ದೇವಾಲಯ ಮತ್ತು ಶ್ರೀ ಮಹಿಷಮರ್ದಿನಿ ಸಮೂಹ ದೇವಾಲಯ ಎಂದು ಪ್ರಕಟಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

ಪಿ. ಆರ್. 712

## ಸಹಕಾರ ಸಚಿವಾಲಯ

**ವಿಷಯ :** ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ ಸಂಘಕ್ಕೆ ಆಡಳಿತಗಾರರನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:**
1. ಸಹಕಾರ ಸಂಘಗಳ ನಿಬಂಧಕರು ಬೆಂಗಳೂರು ರವರ ಪತ್ರ ಸಂಖ್ಯೆ : ಆರ್‌ಸಿಎಸ್/ಎಡಿಎಂ/95/ಎಸ್‌ಓಆರ್/2010–11, ದಿನಾಂಕ 29–10–2010.
2. ಕಾರಣ ಕೇಳುವ ನೋಟೀಸ್ ಸಇ 156 ಸಸಂನೋ 2010 ದಿನಾಂಕ 15–12–2010.
3. ನೂತನ ಅಧ್ಯಕ್ಷರು ಮತ್ತು ಕಾರ್ಯದರ್ಶಿ, ಮಹಿಳಾ ಸಮಾಜ ಕಸ್ತೂರ ಬಾ ಶಿಶುವಿಹಾರ, ದೊಡ್ಡಬಳ್ಳಾಪುರ ರವರ ಲಿಖಿತ ಹೇಳಿಕೆ ದಿನಾಂಕ : 27–12–2010 ಮತ್ತು 28–12–2010.
4. ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿ ಮಹಿಳಾ ಸಮಾಜ ಕಸ್ತೂರ ಬಾ ಶಿಶುವಿಹಾರ, ದೊಡ್ಡಬಳ್ಳಾಪುರ ರವರ ಲಿಖಿತ ಹೇಳಿಕೆ ದಿನಾಂಕ : 28–12–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ದಿನಾಂಕ : 29–10–2010 ರ ಪತ್ರದಲ್ಲಿ ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ (ಸಂಕ್ಷಿಪ್ತವಾಗಿ ಸಮಾಜ) ಆಡಳಿತ ಸಮಿತಿಗೆ ನಿಯಮಾನುಸಾರ ಚುನಾವಣೆ ನಡೆಸಲು ವಿಫಲವಾಗಿರುವುದು, ಸಂಘಗಳ ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರು ನಡೆಸಿರುವ ವಿಚಾರಣೆಯಿಂದ ದೃಢಪಟ್ಟಿರುವುದರಿಂದ, ಮೇಲ್ಕಂಡ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960 ರ ಪ್ರಕರಣ 27(ಎ) ರ ಅವಕಾಶದನ್ವಯ ಆಡಳಿತಗಾರರನ್ನು ನೇಮಿಸುವ ಬಗ್ಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸಂಘದಲ್ಲಿನ ಈ ನ್ಯೂನತೆ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ನೀಡುವಂತೆ ಮೇಲೆ ಓದಲಾದ (2) ರಲ್ಲಿ ಕಾಣಿಸಿರುವಂತೆ ಸಂಘದ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಕಾರಣ ಕೇಳುವ ನೋಟೀಸನ್ನು ನೀಡಿ ಸಂಘಕ್ಕೆ ಆಡಳಿತಗಾರರನ್ನು ಏಕೆ ನೇಮಕಮಾಡಬಾರದು ಎಂಬ ಬಗ್ಗೆ ಲಿಖಿತ/ಮೌಖಿಕ ಹೇಳಿಕೆಯನ್ನು ನೋಟೀಸ್ ತಲುಪಿದ 15 ದಿವಸಗಳ ಒಳಗೆ ಸಲ್ಲಿಸುವಂತೆ ತಿಳಿಸಲಾಗಿತ್ತು.

ಸರ್ಕಾರದಿಂದ ನೀಡಲಾದ ಕಾರಣ ಕೇಳುವ ನೋಟಿಸ್‌ಗೆ ಮೇಲೆ ಓದಲಾದ (3) ಮತ್ತು (4) ರ ಪತ್ರಗಳಲ್ಲಿ ಸಂಘದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ಸಹಿ ಮಾಡಿರುವ ದಿನಾಂಕ : 27–12–2010 ರಲ್ಲಿ ಲಿಖಿತ ಹೇಳಿಕೆಯನ್ನು ನೀಡಿರುತ್ತಾರೆ. ಅಲ್ಲದೆ ಮೇಲೆ ಓದಲಾದ (4) ರ ಪತ್ರದಲ್ಲಿ ಸಂಘದ ಅಧ್ಯಕ್ಷರು/ಉಪಾಧ್ಯಕ್ಷರು/ಕಾರ್ಯದರ್ಶಿ/ಖಜಾಂಚಿ ಮತ್ತು ಇಬ್ಬರು ನಿರ್ದೇಶಕರು ಸೇರಿದಂತೆ 6 ಜನರು ಸಹಿ ಮಾಡಿರುವ ಲಿಖಿತ ಹೇಳಿಕೆಯನ್ನು ನೀಡಿ, ಸಂಸ್ಥೆಯಲ್ಲಿ ಹಾಲಿ ಕಾರ್ಯಕಾರಿ ಸಮಿತಿ ನೇಮಿಸುವ ವಿಚಾರದಲ್ಲಿ ಗೊಂದಲಗಳಿದ್ದು, ಸದರಿ ಸಂಸ್ಥೆಗೆ ಆಡಳಿತಾಧಿಕಾರಿಯನ್ನು ನೇಮಿಸುವ ಕುರಿತು ಅವರ ತಂಟೆ ತಕರಾರು ಯಾವುದೂ ಇರುವುದಿಲ್ಲ ಸಂಘದ ಬೈಲಾ ನಿಯಮಾನುಸಾರ ಚುನಾವಣೆ ನಡೆಸುವವರೆಗೂ ಆಡಳಿತಾಧಿಕಾರಿಯನ್ನು ನೇಮಿಸಲು ಕೋರಿದ್ದಾರೆ.

ಸಂಘದ ಅಧ್ಯಕ್ಷರು ಮತ್ತು ಕಾರ್ಯದರ್ಶಿಯವರು ನೀಡಿರುವ ದಿನಾಂಕ : 27–12–2010 ಮತ್ತು 28–12–2010 ರ ಲಿಖಿತ ಹೇಳಿಕೆಯನ್ನು ಗಮನಿಸಿದಾಗ ಅದರಲ್ಲಿ ಸಂಘದ ಕಾರ್ಯನಿರ್ವಹಣೆಯಲ್ಲಿನ ನ್ಯೂನತೆ ಬಗ್ಗೆ ಹಲವಾರು ಅಂಶಗಳನ್ನು ಪ್ರಸ್ತಾಪಿಸಲಾಗಿದೆ. ದಿನಾಂಕ : 24–10–2010 ರಂದು ಸಮಾಜದ ಸರ್ವ ಸದಸ್ಯರ ಸಭೆಯಲ್ಲಿ 123 ಸದಸ್ಯರು ಹಾಜರಿದ್ದು, ಸರ್ವಾನುಮತದಿಂದ ಕೈ ಎತ್ತುವ ಮೂಲಕ 9 ಸದಸ್ಯರನ್ನು ನಿರ್ದೇಶಕರನ್ನಾಗಿ ಆಯ್ಕೆ ಮಾಡಲಾಗಿದೆ. ಸಮಾಜದ ನೂತನ ಪದಾಧಿಕಾರಿಗಳ ಆಯ್ಕೆಯು ಸಮಾಜದ ಬೈಲಾಗೆ ಅನುಗುಣವಾಗಿದ್ದು ಯಾವುದೇ ಕಾಯಿದೆಯನ್ನು ಉಲ್ಲಂಘನೆ ಮಾಡಿಲ್ಲವೆಂದು ಹಾಗೂ ಸಮಾಜಕ್ಕೆ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಇರುವುದಿಲ್ಲವೆಂದು ಹೇಳಿಕೆ ನೀಡಿರುತ್ತಾರೆ.

ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ದೊಡ್ಡಬಳ್ಳಾಪುರ ಇದರ ಕಾರ್ಯಚಟುವಟಿಕೆಗಳ ಕುರಿತು ಸಂಘಗಳ ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ರವರ ದಿನಾಂಕ : 13–10–2010 ರ ವರದಿಯನ್ನು ಗಮನಿಸಿದಾಗ ಸಂಘದ ಸಮಿತಿಗೆ ಚುನಾವಣೆಯನ್ನು ನಿಯಮಾನುಸಾರ ನಿರ್ವಹಿಸಿರುವುದಿಲ್ಲ ಎಂಬ ಅಂಶ ವ್ಯಕ್ತವಾಗುತ್ತದೆ. ಸಮಾಜದ ಹಿಂದಿನ ಮಹಾಸಭೆಗಳಲ್ಲಿ ಕಾರ್ಯಕಾರಿ ಸಮಿತಿಯ ಆಯ್ಕೆ ಸದಸ್ಯರುಗಳ ಕೈ ಎತ್ತುವುದರ ಮೂಲಕ ಜರುಗುತ್ತಿತ್ತು. ಸಮಾಜಕ್ಕೆ ವೀಕ್ಷಣಾಧಿಕಾರಿಯಾಗಿ ಜಿಲ್ಲಾ ನೋಂದಣಾಧಿಕಾರಿಗಳು ಒಬ್ಬ ಅಧಿಕಾರಿಯನ್ನು ನಿಯೋಜಿಸಿದ್ದು, ದಿನಾಂಕ : 29–09–2010 ರಂದು ನಡೆದ ಸರ್ವ ಸದಸ್ಯರ ಸಭೆಯಲ್ಲಿ ದಿನಾಂಕ : 24–10–2010 ರಂದು ಚುನಾವಣೆಯನ್ನು ನಡೆಸಲು ನಿರ್ಣಯಿಸಿದ್ದು, ನಿಯಮಾನುಸಾರ ಚುನಾವಣೆ ನಡೆಸಲು 123 ಸದಸ್ಯರು ಆಗ್ರಹಿಸಿರುವುದಾಗಿ ವೀಕ್ಷಣಾಧಿಕಾರಿ ವರದಿ ಮಾಡಿರುವುದಾಗಿ ತಿಳಿಸಿದ್ದಾರೆ. ಅಲ್ಲದೇ ಸಮಾಜಕ್ಕೆ ಚುನಾವಣೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಿಸಿದ್ದರೂ ಸಮಿತಿಯು ಯಾವುದೇ ಕ್ರಮ ತೆಗೆದುಕೊಂಡಿರುವುದಿಲ್ಲ ಎಂದು ಚುನಾವಣಾಧಿಕಾರಿ ವರದಿ ಮಾಡಿರುವುದಾಗಿ ಜಿಲ್ಲಾ ನೋಂದಣಾಧಿಕಾರಿಯವರ ವರದಿಯಿಂದ ತಿಳಿದುಬರುತ್ತದೆ.

ಸಂಘದ ನಿಬಂಧನೆ ಸಂಖ್ಯೆ 8(ಸಿ) ರ ಮೇರೆಗೆ ಒಂದು ವರ್ಷಕ್ಕೆ ಒಮ್ಮೆ ಸರ್ವ ಸದಸ್ಯರ ಸಭೆಯಲ್ಲಿ ಒಟ್ಟು 9 ಜನರನ್ನು ಕಾರ್ಯಕಾರಿ ಸಮಿತಿಗೆ ಚುನಾಯಿಸಬೇಕು. ಅದರಂತೆ ದಿನಾಂಕ : 29–09–2010 ರಂದು ಜರುಗಿದ ಮಹಾಸಭೆಯಲ್ಲಿ ಸಂಘದ ಕಾರ್ಯಕಾರಿ ಸಮಿತಿಯ ಚುನಾವಣೆಯನ್ನು ನಿಯಮಾನುಸಾರ ಜರುಗಿಸಲು ಕ್ರಮವಹಿಸಿರುವುದಿಲ್ಲ ಎಂದು ಸಂಘಗಳ ಜಿಲ್ಲಾ ನೋಂದಣಾಧಿಕಾರಿಗಳು ವರದಿಯಲ್ಲಿ ತಿಳಿಸಿದ್ದಾರೆ. ಅಲ್ಲದೆ ಸಂಘದ ಸದಸ್ಯರುಗಳು ಮತ್ತು ಕಾರ್ಯಕಾರಿ ಸಮಿತಿಯ ಮಧ್ಯೆ ಭಿನ್ನಾಭಿಪ್ರಾಯಗಳು ಬಂದಿದ್ದು, ಸಂಘದ ಅಭಿವೃದ್ಧಿಗೆ ಧಕ್ಕೆ ಉಂಟಾಗುವ ಸ್ಥಿತಿಗೆ ಅವಕಾಶವಾಗಿರುತ್ತದೆ ಹಾಗೂ ಸಂಘದಲ್ಲಿ ಸದಸ್ಯರುಗಳ ಪಟ್ಟಿಯನ್ನು ಸಮರ್ಪಕವಾಗಿ ನಿರ್ವಹಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಸಂಘದ ಅಧ್ಯಕ್ಷರು ದಿನಾಂಕ : 11–10–10 ರ ಪತ್ರದಲ್ಲಿ ಸಂಘದ ಸದಸ್ಯತ್ವದ ಪಟ್ಟಿಯಲ್ಲಿ ಕೆಲವು ಸದಸ್ಯರುಗಳನ್ನು ಕೈಬಿಟ್ಟಿರುವುದರಿಂದ ಅದನ್ನು ಸರಿಪಡಿಸಲು ಹಾಗೂ ಸದಸ್ಯರಿಗೆ ಭಾವಚಿತ್ರವಿರುವ ಗುರುತಿನ ಚೀಟಿ ನೀಡಲು ಕಾಲಾವಕಾಶಬೇಕಾಗಿರುವುದರಿಂದ ಚುನಾವಣೆ ನಡೆಸಲು ಸುಮಾರು 4 ತಿಂಗಳು ಕಾಲಾವಕಾಶಬೇಕೆಂದು ಕೋರಿದ್ದಾರೆ. ಈ ರೀತಿ ಕಾಲಾವಕಾಶ ನೀಡಲು ಕರ್ನಾಟಕ ಸಂಘಗಳ ಅಧಿನಿಯಮದಡಿ ಅವಕಾಶವಿರುವುದಿಲ್ಲವೆಂದು ವರದಿ ಮಾಡಿದ್ದು, ಸಂಘದ ಆಡಳಿತದಲ್ಲಿ ಶೂನ್ಯತೆ ಉಂಟಾಗಿರುವುದರಿಂದ ಸಂಘಕ್ಕೆ ಆಡಳಿತಾಧಿಕಾರಿಯನ್ನು ನೇಮಿಸುವ ಅವಶ್ಯಕತೆ ಇರುವುದಾಗಿ ಅಭಿಪ್ರಾಯಪಟ್ಟಿದ್ದಾರೆ.

ಮೇಲೆ ಓದಲಾದ (3) ರ ಸಂಘದ ಅಧ್ಯಕ್ಷರ/ಕಾರ್ಯದರ್ಶಿಯವರ ದಿನಾಂಕ : 27–12–2010 ರ ಹೇಳಿಕೆಯನ್ನು ಗಮನಿಸಿದಾಗ ದಿನಾಂಕ : 24–10–10 ರಂದು ನಡೆದ ವಿಶೇಷ ಸಭೆಯಲ್ಲಿ 2010–11 ನೇ ಸಾಲಿಗೆ ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ)ಗೆ 9 ಜನ ನಿರ್ದೇಶಕರನ್ನು

ಸರ್ವಾನುಮತದಿಂದ ಕೈ ಎತ್ತುವ ಮೂಲಕ ಆಯ್ಕೆ ಮಾಡಲಾಗಿದೆ ಎಂದು ತಿಳಿಸಿದ್ದಾರೆ. ಅಲ್ಲದೇ ಸಮಾಜದಲ್ಲಿ ಈ ಹಿಂದೆಯೂ ಸರ್ವಸದಸ್ಯರ ಸಭೆಯನ್ನು ಸರಿಯಾಗಿ ನಡೆಸಿರುವುದಿಲ್ಲವೆಂಬ ಅಂಶವನ್ನು ತಮ್ಮ ಹೇಳಿಕೆಯಲ್ಲಿ ಪ್ರಸ್ತಾಪಿಸಿದ್ದಾರೆ.

ಸಮಾಜದ ಬೈಲಾ ರೀತ್ಯಾ ಒಂದು ವರ್ಷಕ್ಕೆ ಒಮ್ಮೆ ಸರ್ವಸದಸ್ಯರ ಸಭೆಯಲ್ಲಿ ಕಾರ್ಯಕಾರಿ ಸಮಿತಿಗೆ ಸದಸ್ಯರನ್ನು ಚುನಾಯಿಸಬೇಕಾಗಿರುತ್ತದೆ. ಸಮಾಜದ ಓದಲಾದ (3) ರ ಪತ್ರವನ್ನು ಗಮನಿಸಿದಾಗ ದಿನಾಂಕ : 24–10–2010 ರಂದು ನಡೆದಿದೆ ಎನ್ನಲಾದ ಚುನಾವಣೆಯೂ ಕ್ರಮವಾಗಿದೆ ಎಂದು ಹೇಳಲು ಬರುವುದಿಲ್ಲ ಕಾರಣ ಚುನಾವಣೆ ನಡೆಸುವ ಸಂಬಂಧ ಚುನಾವಣಾಧಿಕಾರಿಯು, ಚುನಾವಣಾ ವೇಳಾಪಟ್ಟಿಯನ್ನು ಪ್ರಕಟಿಸಿ, ಅದನ್ನು ಎಲ್ಲಾ ಸದಸ್ಯರಿಗೂ ಕಳುಹಿಸಿ, ಉಮೇದುವಾರಿಕೆ ಅರ್ಜಿ/ನಾಮನಿರ್ದೇಶನ ಅರ್ಜಿ ಸ್ವೀಕರಿಸುವಿಕೆ, ಪರಿಶೀಲನೆ, ಉಮೇದುವಾರಿಕೆ ವಾಪಸ್ಸು, ಅಂತಿಮ ಸ್ಪರ್ಧಿಗಳ ಪಟ್ಟಿ ಅಗತ್ಯತೆವೆನಿಸಿದರೆ ಚುನಾವಣೆ ನಡೆಸುವಿಕೆ ಈ ರೀತಿ ವಿವಿಧ ಹಂತಗಳಲ್ಲಿ ಚುನಾವಣಾ ನಡವಳಿಗಳು ಕ್ರಮ ಪ್ರಕಾರ ನಡೆಯಬೇಕಾಗಿದ್ದು, ಇದು ನ್ಯಾಯೋಚಿತ ಕ್ರಮವಾಗುತ್ತದೆ. ಆದರೆ ಇದ್ಯಾವುದನ್ನು ನಡೆಸದೆ, ಚುನಾವಣೆ ನಡೆದಿದೆ ಎಂಬ ನಿರ್ಣಯಕ್ಕೆ ಬರುವುದು ಸಮಂಜಸವಾಗಿರುವುದಿಲ್ಲ. ಅಲ್ಲದೇ ಮೇಲ್ಕಂಡ ಕ್ರಮ ಅನುಸರಿಸಿ ಚುನಾವಣೆಯನ್ನು ನಡೆಸದಿರುವುದು ಸಮಾಜದ ಆಡಳಿತ ಸಮಿತಿಯ ಕರ್ತವ್ಯಲೋಪವಾಗುತ್ತದೆ.

ಮೇಲೆ ವಿವರಿಸಲಾದ ಎಲ್ಲ ಅಂಶಗಳನ್ನು ಗಮನಿಸಿದಾಗ ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ಸಂಘದಲ್ಲಿ ಆಡಳಿತ ಸಮಿತಿ ಅವಧಿ ಮುಗಿದಿದ್ದು, ನೂತನ ಆಡಳಿತ ಸಮಿತಿಯನ್ನು ಕಾನೂನು ಕ್ರಮ ಅನುಸರಿಸಿ ರಚನೆ ಮಾಡದೇ ಇರುವುದು ವ್ಯಕ್ತವಾಗುತ್ತದೆ. ಕರ್ನಾಟಕ ಸಂಘಗಳ ಅಧಿನಿಯಮ 1960 ರ ಪ್ರಕರಣ 27(ಎ) ರೀತ್ಯಾ ವಾರ್ಷಿಕ ಮಹಾಸಭೆಯನ್ನು ನಡೆಸದಿರುವಿಕೆ ಮತ್ತು ಆಡಳಿತ ಸಮಿತಿ ಅವಧಿ ಮುಗಿದಿರುವ ಸಂಘದಲ್ಲಿ ನೂತನ ಆಡಳಿತ ಸಮಿತಿಯನ್ನು ಯಾವುದೇ ಕಾರಣದಿಂದಾಗಲೀ ರಚನೆ ಮಾಡದಿರುವ ಪ್ರಕರಣಗಳಲ್ಲಿ ಸರ್ಕಾರವು ರಿಜಿಸ್ಟ್ರಾರ್ ರವರ ವರದಿ ಆಧರಿಸಿ ಪರಿಶೀಲಿಸಿ ವಿಚಾರಣೆ ಮಾಡಿ ಅಂತಹ ಸಂಘಕ್ಕೆ ಸರ್ಕಾರವು ಆಡಳಿತಗಾರರನ್ನು ನೇಮಿಸಲು ಅವಕಾಶವಿರುತ್ತದೆ.

ಮೇಲ್ಕಂಡ ಸಮಾಜದ ನ್ಯೂನತೆಗಳ ಸಂಬಂಧ ಅಂದರೆ ಆಡಳಿತ ಸಮಿತಿ ಅವಧಿ ಮುಗಿದಿದ್ದು, ನೂತನ ಆಡಳಿತ ಸಮಿತಿಗೆ ರಚನೆ ಮಾಡದಿರುವ ಬಗ್ಗೆ ಸಹಕಾರ ಸಂಘಗಳ ನಿಬಂಧಕರು/ಸಂಘಗಳ ಜಿಲ್ಲಾ ನೋಂದಣಾಧಿಕಾರಿಯವರು ನೀಡಿರುವ ವರದಿಯನ್ನು ಆಧರಿಸಿ, ಸಂಘಕ್ಕೆ ಕರ್ನಾಟಕ ಸಂಘಗಳ ಅಧಿನಿಯಮ 1960 ರ ಪ್ರಕರಣ 27ಎ ರೀತ್ಯಾ ಏಕೆ ಆಡಳಿತಗಾರರನ್ನು ನೇಮಿಸಬಾರದು ಎಂಬ ಬಗ್ಗೆ ಸಂಘದ ಕಾರ್ಯಕಾರಿ ಸಮಿತಿಯ ಅಧ್ಯಕ್ಷರು/ಕಾರ್ಯದರ್ಶಿಯವರಿಗೆ ಕಾರಣ ಕೇಳುವ ನೋಟಿಸನ್ನು ನೀಡಿ ತಮ್ಮ ಹೇಳಿಕೆ ಏನಾದರೂ ಇದ್ದಲ್ಲಿ ಸಮಜಾಯಿಸಿ ನೀಡಲು ಸೂಕ್ತ ಕಾಲಾವಕಾಶವನ್ನು ನೀಡಲಾಗಿದೆ ಮತ್ತು ಅವರು ಲಿಖಿತವಾಗಿ ಸಲ್ಲಿಸಲಾದ ಲಿಖಿತ ಹೇಳಿಕೆಯನ್ನು ಪರಿಗಣಿಸಲಾಗಿದೆ. ಮೇಲೆ ಓದಲಾದ (3) ರ ಲಿಖಿತ ಹೇಳಿಕೆಯಲ್ಲಿ ಸಂಘಕ್ಕೆ ನೂತನ ಸಮಿತಿ ಆಯ್ಕೆ ಮಾಡಲಾಗಿದೆ ಎಂಬ ಉತ್ತರ ಒಪ್ಪತಕ್ಕದ್ದಾಗಿರುವುದಿಲ್ಲವಾದ ಕಾರಣ, ನೂತನ ಆಡಳಿತ ಸಮಿತಿಗೆ ನಿಯಮಾನುಸಾರ ಚುನಾವಣೆಯನ್ನು ನಡೆಸಿ ನೂತನ ಆಡಳಿತ ಸಮಿತಿ ರಚನೆ ಮಾಡದಿರುವುದು ಸಾಬೀತಾಗಿರುತ್ತದೆ. ಸರ್ಕಾರವು ಈ ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಮೇಲ್ಕಂಡ ಸಮಾಜಕ್ಕೆ ಪ್ರಕರಣ 27–ಎ ರ ಅಡಿಯಲ್ಲಿ ಸಮಾಜದ ಹಿತದೃಷ್ಟಿ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಆಡಳಿತಗಾರರನ್ನು ನೇಮಿಸುವುದು ಸೂಕ್ತ ಎಂದು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 156 ಸಸಂನೋ 2010 ಬೆಂಗಳೂರು, ದಿನಾಂಕ: 13–01–2011.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಹಿಳಾ ಸಮಾಜ ಕಸ್ತೂರಿ ಬಾ ಶಿಶುವಿಹಾರ (ರಿ), ಹಳೆ ಬಸ್ ನಿಲ್ದಾಣ ಸಮೀಪ, ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಸ್ಥೆಯ ಆಡಳಿತ ಮಂಡಳಿಯ ಅವಧಿಯು ಮುಗಿದಿದ್ದು ಹಾಗೂ ಸಂಘದ ಆಡಳಿತ ಮಂಡಳಿಯು ನೂನತ ಆಡಳಿತ ಸಮಿತಿಯನ್ನು ಕಾನೂನು ಬದ್ಧವಾಗಿ ಚುನಾವಣೆ ನಡೆಸಿ ರಚಿಸುವಲ್ಲಿ ವಿಫಲವಾಗಿರುವುದು ದೃಢಪಟ್ಟಿರುವುದರಿಂದ, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960 ರ ಪ್ರಕರಣ 27–ಎ ರ ಅಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಶಿಶು ಅಭಿವೃದ್ಧಿ, ಯೋಜನಾಧಿಕಾರಿ, ದೊಡ್ಡಬಳ್ಳಾಪುರ ರವರನ್ನು ಸಮಾಜದ ಆಡಳಿತ ವ್ಯವಹಾರಗಳನ್ನು ನಿರ್ವಹಿಸಲು ಆಡಳಿತಗಾರರನ್ನಾಗಿ 6 ತಿಂಗಳ ಅವಧಿಗೆ ಅಥವಾ ಸದರಿ ಸಂಸ್ಥೆಗೆ ಕಾನೂನು ಬದ್ಧವಾಗಿ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿದೆ. ಆಡಳಿತಗಾರರು ಸಂಘಗಳ ನೋಂದಣಿ ಅಧಿನಿಯಮ 1960, ಸಂಘಗಳ ನೋಂದಣಿ ನಿಯಮಗಳು/ಸಮಾಜದ ನಿಬಂಧನೆಗಳ ಅವಕಾಶಗಳನ್ನು ಗಮನಿಸಿ ಸಂಘದ ಆಡಳಿತ ಸಮಿತಿಗೆ ಚುನಾವಣೆ ನಡೆಸಿ, ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.291

**ನಂಜುಂಡಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

## INFRASTRUCTURE DEVELOPMENT SECRETARIAT

**Sub :** Establishment of a Joint Venture Company by KSIIDC and GAIL India Ltd., for City Gas Distribution (CGD) Project – Release of funds for City Gas Distribution projects.

**Read :**
1. MoU signed between GOK and GAIL dated on 29-04-2009.
2. G.O. IDD 14 UIP 2008 dated 25-11-2009.
3. Proceedings of High level Committee meeting held on 06-04-2010.
4. Letter No. KSIIDC/IDD/2010-11/2005 dated 26-11-2010 of Managing Director, KSIIDC.

**Preamble:**

A memorandum of Understanding (MoU) for Natural gas Infrastructure and CGD was signed between GoK and GAIL on 29-04-2009 between the State Government in IDD and GAIL, In G.O. read at (2) above, KSIIDC has been nominated as the Nodal Agency for Dhabhol – Bangalore Gas pipeline project. As per the MoU Promotion of Joint Venture for CGD projects for Domestic, Commercial, Industrial and Transport sectors with the participation of GAIL, KSIIDC, KSRTC and BMTC was also agreed. GAIL and

IDD to conduct necessary Techno economic studies based on demand potential and geographical distribution of demand and address accordingly the requirements of Infrastructure for CG distribution Networks and associated facilities for the state under feasible supply options on long term competitive basis. CGD is also proposed to be taken up by the Government of Karnataka.

2. In the H.L.C. meeting held on 06-04-2010 under the Chairmanship of Chief Secretary to Government read at Sl. No. (3) above, it was decided that KSIIDC to be the Joint Venture partner with GAIL Gas Ltd., for CGD and IDD will be the Nodal Department to finalise further details. Accordingly, a Memorandum of Intent (MoI) has been signed between IDD, GOK and GAIL regarding intent to setup a Joint Venture Company (JVC) on 3-06-2010.

3. For carrying out the following works KSIIDC has requested for release of Rs. 86.50 lakhs.
   - Finalization of draft of JVA
   - Draft of MOA and AOA
   - Finalization and Checking of availability of name
   - Registration of the Company
   - Formation and working of Steering Committee
   - Preparation of Feasibility Report for CGD in Bangalore.

4. The proposal of KSIIDC has been examined and it is decided to appoint KSIIDC as a nodal agency to co-ordinate in all the matters on behalf of IDD/GOK and also to enter into an agreement/MOU with GAIL.

5. Hence the following order.

**Government Order No. IDD 18 UIP 2010, Bangalore, Dated : 20th January 2011.**

**GOK is pleased to accord approval**

i. For Formation of a Joint Venture Company between GAIL/GAIL GAS Limited and KSIIDC (on behalf of GOK) for the City Gas Distribution Project.

ii. To enter into a Joint Venture Agreement between GAIL/GAIL GAS Limited and KSIIDC (on behalf of GOK)

iii. KSIIDC to invest upto Rs. 24 crores on behalf of GOK being 24% of the Equity Share capital of the JVC upto an authorized capital of Rs. 100 crores.

iv. To setup a Steering Committee with the following members;
   a) Principal Secretary to Government, Infrastructure Development Department.
   b) Principal Secretary to Government, Commerce and Industry Department.
   c) Principal Secretary to Government, Energy Department.
   d) Managing Director, KSIIDC.

v. To authorize the Principal Secretary, Infrastructure Development Department to take further necessary actions as required regarding extension of scope of the Apex Level Committee and High level Committee constituted for the Dabhol – Bangalore Gas Pipeline Project, and for any other issues required in respect of the project.

2. GOK is pleased to release an amount of Rs. 86.50 lakhs (Eighty six lakhs fifty thousands only) towards formation of a company and other related activities as under :-

| Sl. No. | Particulars | Amount (Rs. In lakhs) |
|---|---|---|
| 1. | 50% of share in initital paid up share capital (of Rs. 5 lakhs) | 2.50 |
| 2. | Commissioning of studies/reports (50% of approximate estimated amount) | 55.00 |
| 3. | CGD cell and other Miscellaneous expenses. | 29.00 |
| | TOTAL … | 86.50 |

3. This expenditure shall be met from the Head of Account "3451-00-090-1-06-059 Infrastructure Preliminary Studies-other Expenditure" out of the Budget provision of Rs. 797.00 lakhs in 2010-11.

4. The Managing Director, KSIIDC is authorized to draw the amount on a Payees Receipt duly countersigned by the Under Secretary to Government, Infrastructure Development Department.

5. this order is issued in accordance with the concurrence of F.D. given, vide No. FD 1850. Exp-I 2010 dated 16-11-2010.

By Order and in the name of the Governor of Karnataka,

PR. 292

**C.A. Baburavindranath Patel**
Under Secretary to Government,
Infrastructure Development Department

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** **ರಾಜ್ಯದ ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತಿಗಳಿಗೆ ಆಡಳಿತಾಧಿಕಾರಿಗಳನ್ನು ನೇಮಿಸುವ ಬಗ್ಗೆ.**

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ : ಗ್ರಾಅಪ 230 ಜಿಪಸ 2005, ದಿನಾಂಕ 01–09–2006.

2. ಸರ್ಕಾರದ ಅಧಿಸೂಚನೆ ಸಂಖ್ಯೆ : ಗ್ರಾಅಪ 2 ಜಿಪಸ 2011, ದಿನಾಂಕ 10–01–2011.

**ಪ್ರಸ್ತಾವನೆ :**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 173(2) ರನ್ವಯ ಸದಸ್ಯರ ಅಧಿಕಾರಾವಧಿಯು ಮೊದಲ ಸಭೆಯು ನಡೆದ ದಿನಾಂಕದಿಂದ ಐದು ವರ್ಷಗಳಾಗಿದ್ದು, ಓದಲಾದ (1)ರ ಅಧಿಸೂಚನೆಯಲ್ಲಿ 2006 ರಲ್ಲಿ ನಡೆಸಲಾದ ಸಾರ್ವತ್ರಿಕ ಚುನಾವಣೆಯ ನಂತರ ನಡೆಸಲಾದ ಮೊದಲ ಸಭೆಯ ದಿನಾಂಕಗಳನ್ನು ಅಧಿಸೂಚಿಸಲಾಗಿರುತ್ತದೆ. ಅದರನ್ವಯ ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತಿಗಳ ಸದಸ್ಯರ ಪದಾವಧಿಯು ಜನವರಿ – ಫೆಬ್ರವರಿ 2011 ರ ವಿವಿಧ ದಿನಾಂಕಗಳಂದು ಮುಕ್ತಾಯಗೊಳ್ಳುತ್ತದೆ.

ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತಿಗಳಿಗೆ ಡಿಸೆಂಬರ್ 2010 ರಲ್ಲಿ ಸಾರ್ವತ್ರಿಕ ಚುನಾವಣೆಯನ್ನು ನಡೆಸಲಾಗಿದ್ದು, ಚುನಾಯಿತ ಸದಸ್ಯರ ಹೆಸರುಗಳನ್ನು ಪ್ರಕರಣ 172 ರನ್ವಯ ಅಧಿಸೂಚಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. ಚುನಾಯಿತ ಸದಸ್ಯರ ಹೆಸರುಗಳನ್ನು ಪ್ರಕಟಿಸಿದ ದಿನಾಂಕದಿಂದ ಒಂದು ತಿಂಗಳೊಳಗೆ ಮೊದಲ ಸಭೆಯನ್ನು ಕರೆಯಬೇಕಾಗಿದ್ದು, ಪ್ರಕರಣ 138 ಹಾಗೂ 177ರನ್ವಯ ಸದರಿ ಸಭೆಯಲ್ಲಿ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆಯನ್ನು ನಡೆಸಬೇಕಾಗುತ್ತದೆ. ಉಲ್ಲೇಖಿತ (2) ರ ಅಧಿಸೂಚನೆಯಲ್ಲಿ ಜಿಲ್ಲಾ ಪಂಚಾಯತಿ ಅಧ್ಯಕ್ಷ ಮತ್ತು ಉಪಾಧ್ಯಕ್ಷ ಹುದ್ದೆಗಳಿಗೆ ಮೀಸಲಾತಿಯನ್ನು ನಿಗಧಿಗೊಳಿಸಲಾಗಿದೆ.

ಪ್ರಸ್ತುತ ಚುನಾಯಿತ ಸದಸ್ಯರುಗಳ ಅವಧಿಯು ಮುಕ್ತಾಯಗೊಂಡಿರುವ ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತಿಗಳಲ್ಲಿ, ಹೊಸದಾಗಿ ಚುನಾಯಿತರಾದ ಸದಸ್ಯರ ಮೊದಲನೇ ಸಭೆಯನ್ನು ಏರ್ಪಡಿಸುವವರೆಗೆ ಶೂನ್ಯ (vaccum) ಪರಿಸ್ಥಿತಿಯು ನಿರ್ಮಾಣಗೊಳ್ಳುವುದರಿಂದ, ಇಂತಹ ಸಂದರ್ಭಗಳಲ್ಲಿ ವಹಿಸಬಹುದಾದ ಕ್ರಮದ ಬಗ್ಗೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರಲ್ಲಿ ಯಾವುದೇ ಉಲ್ಲೇಖವಿಲ್ಲದಿರುವುದರಿಂದ ಮತ್ತು ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993 ರ ಪ್ರಕರಣ 321 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಳ್ಳುವುದು ಅನಿವಾರ್ಯವಾಗಿರುವುದರಿಂದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 10 ಜಿಪಸ 2011 ಬೆಂಗಳೂರು, ದಿನಾಂಕ: 14–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅವಧಿಯು ಮುಕ್ತಾಯಗೊಂಡ ಜಿಲ್ಲಾ ಪಂಚಾಯತಿಗಳಿಗೆ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಆಯ್ಕೆ ಪ್ರಕ್ರಿಯೆ ಮುಗಿಯುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಯಾ ವಿಭಾಗದ ಪ್ರಾದೇಶಿಕ ಆಯುಕ್ತರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಅವಧಿಯು ಮುಕ್ತಾಯಗೊಂಡ ತಾಲ್ಲೂಕು ಪಂಚಾಯತಿಗಳಿಗೆ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಆಯ್ಕೆ ಪ್ರಕ್ರಿಯೆ ಮುಗಿಯುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಯಾ ಉಪ ವಿಭಾಗಾಧಿಕಾರಿಯನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.293

**ಸ್ವರ್ಣಲತ ಎಂ ಭಂಡಾರೆ**

ಸರ್ಕಾರದ ಅಧೀನ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ :** ಬಳ್ಳಾರಿ ಜಿಲ್ಲೆಯ ಬಾಲನ್ಯಾಯ ಮಂಡಳಿಗೆ ಸಮಾಜ ಕಾರ್ಯಕರ್ತರನ್ನು ನಾಮನಿರ್ದೇಶಿಸಲು ಮತ್ತು ಯಾದಗಿರಿ ಜಿಲ್ಲೆಯ ಬಾಲನ್ಯಾಯ ಮಂಡಳಿಯ ಕಾರ್ಯವ್ಯಾಪ್ತಿಯನ್ನು ಗುಲ್ಬರ್ಗಾ ಜಿಲ್ಲೆಗೆ ಒಳಪಡಿಸುವ ಕುರಿತು.

**ಓದಲಾಗಿದೆ :** 1. ದಿನಾಂಕ : 14–10–2010 ರ ಆದೇಶ ಸಂ : ಮಮಇ 206 ಮಭಾಬ 2010.

2. ದಿನಾಂಕ : 20–10–2010 ರ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರ ಪತ್ರ ಸಂ : ಮಮಅಇ/ಪಿಡಿಎಂ/ಪ.ಅ.–2/62/2010–11.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1) ರ ಆದೇಶದಲ್ಲಿ ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ, 2000, ತಿದ್ದುಪಡಿ 2006 ಸೆಕ್ಷನ್ 4 ಮತ್ತು 29 ರಡಿ ಯಾದಗಿರಿ ಜಿಲ್ಲೆಯನ್ನು ಹೊರತುಪಡಿಸಿ 28 ಜಿಲ್ಲೆಗಳ ಬಾಲನ್ಯಾಯ ಮಂಡಳಿಗಳಿಗೆ ಅಧ್ಯಕ್ಷರು ಹಾಗೂ ಸಮಾಜ ಕಾರ್ಯಕರ್ತರನ್ನು ನಾಮನಿರ್ದೇಶನ ಮಾಡಿ ಆದೇಶ ಹೊರಡಿಸಿದೆ.

ಮೇಲೆ ಓದಲಾದ ಕ್ರಮಾಂಕ (2) ರಲ್ಲಿ ಈ ಹಿಂದೆ ಬಳ್ಳಾರಿ ಜಿಲ್ಲೆಯ ಬಾಲನ್ಯಾಯ ಮಂಡಳಿಗೆ ಸೂಕ್ತವಾದ ಅಭ್ಯರ್ಥಿಗಳು ದೊರಕದ ಕಾರಣ ಸಮಾಜ ಕಾರ್ಯಕರ್ತರನ್ನು ಆಯ್ಕೆ ಮಾಡಿರುವುದಿಲ್ಲ. ಪ್ರಸ್ತುತ ಬಳ್ಳಾರಿ ಜಿಲ್ಲೆಗೆ ಬಾಲನ್ಯಾಯ ಮಂಡಲಿಗೆ ಈ ಹಿಂದೆ ಜಾರಿಯಲ್ಲಿದ್ದ ಮಂಡಳಿಯನ್ನೇ ಮುಂದುವರೆಸಬಹುದಾಗಿರುತ್ತದೆ ಹಾಗೂ ಮಂಡಳಿಯ ಸದಸ್ಯರಾದ ಶ್ರೀ ಹೆಚ್. ವೀರಶೇಖರ್, ವಕೀಲರು, ಚಾಗನೂರು ಇವರು ಬಾಲನ್ಯಾಯ ಮಂಡಳಿ, ಬಳ್ಳಾರಿ ಇಲ್ಲಿ ಸಮಾಜ ಕಾರ್ಯಕರ್ತರಾಗಿ ಮುಂದುವರೆಯಲು ಒಪ್ಪಿಗೆ ನೀಡಿದ್ದು, ಇವರನ್ನು ಮುಂದುವರೆಸುವಂತೆ ಮತ್ತು ಯಾದಗಿರಿ ಜಿಲ್ಲೆಗೆ ಬಾಲನ್ಯಾಯ ಮಂಡಳಿ ರಚನೆಯಾಗದ ಹಿನ್ನೆಲೆಯಲ್ಲಿ ಇದರ ವ್ಯಾಪ್ತಿಯನ್ನು ಗುಲ್ಬರ್ಗಾ ಜಿಲ್ಲೆಯ ಬಾಲನ್ಯಾಯ ಮಂಡಳಿಯ ವ್ಯಾಪ್ತಿಗೆ ನೀಡುವಂತೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 206 ಮಭಾಬ 2010, ಬೆಂಗಳೂರು, ದಿನಾಂಕ: 20-01-2011.**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಬಾಲನ್ಯಾಯ (ಮಕ್ಕಳ ಪಾಲನೆ ಮತ್ತು ಪೋಷಣೆ) ಅಧಿನಿಯಮ, 2000, ತಿದ್ದುಪಡಿ 2006 ಸೆಕ್ಷನ್ 4 ಮತ್ತು 29 ರಡಿ ಬಳ್ಳಾರಿ ಜಿಲ್ಲೆಗೆ ಬಾಲನ್ಯಾಯ ಮಂಡಳಿಗೆ ಶ್ರೀ ಹೆಚ್. ವೀರಶೇಖರ್, ವಕೀಲರು, ಚಾಗನೂರು ಇವರನ್ನು ಸಮಾಜ ಕಾರ್ಯಕರ್ತರನ್ನಾಗಿ ಅನುಬಂಧದಲ್ಲಿನ ಷರತ್ತಿನೊಂದಿಗೆ ನಾಮನಿರ್ದೇಶನ ಮಾಡಿದೆ ಹಾಗೂ ಯಾದಗಿರಿ ಜಿಲ್ಲೆಯಲ್ಲಿ ಅಭ್ಯರ್ಥಿಗಳು ಲಭ್ಯವಾಗದ ಕಾರಣ ಸದರಿ ಜಿಲ್ಲೆಯ ಬಾಲನ್ಯಾಯ ಮಂಡಳಿಯನ್ನು ಮುಂದಿನ ಆದೇಶದವರೆಗೆ ಗುಲ್ಬರ್ಗಾ ಜಿಲ್ಲೆಯ ಕಾರ್ಯವ್ಯಾಪ್ತಿಗೆ ಒಳಪಡಿಸಿ ಆದೇಶಿಸಿದೆ.

ಈ ಬಾಲನ್ಯಾಯ ಮಂಡಳಿಯು ಬಾಲನ್ಯಾಯ ಕಾಯಿದೆ 2000 ಮತ್ತು ನಿಯಮ 2007ರನ್ವಯ ಪ್ರದತ್ತವಾದ ಕರ್ತವ್ಯಗಳನ್ನು ನಿರ್ವಹಿಸಲು ಅಧಿಕಾರವನ್ನು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ – 1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಅನುಬಂಧ

**(ಆದೇಶ ಸಂಖ್ಯೆ: ಮಮಇ 206 ಮಭಾಬ 2010, ಬೆಂಗಳೂರು, ದಿನಾಂಕ: 20-01-2011) ರ**

**ಷರತ್ತುಗಳು**

1. ಬಾಲನ್ಯಾಯ ಮಂಡಳಿಯ ಕಾರ್ಯವ್ಯಾಪ್ತಿಯು ಆಯಾ ಜಿಲ್ಲೆಗೆ ಮಾತ್ರ ಸೀಮಿತವಾಗಿರುತ್ತದೆ.
2. ಕಾನೂನು ಸಂಘರ್ಷಕ್ಕೆ ಒಳಪಡುವ ಮಕ್ಕಳ ಪ್ರಕರಣಗಳನ್ನು ನಿರ್ವಹಿಸುವುದು.
3. ಬಾಲನ್ಯಾಯ ಮಂಡಳಿಯಲ್ಲಿ ಕಾರ್ಯಾವಧಿಯು ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷಗಳವರೆಗೆ ಸೀಮಿತವಾಗಿರುತ್ತದೆ.
4. ಪ್ರತಿಯೊಬ್ಬ ಸದಸ್ಯರು ಪ್ರತಿ ಸಿಟ್ಟಿಂಗ್‌ನಲ್ಲಿ ಕನಿಷ್ಠ 4 ಗಂಟೆಗಳು ಕಾರ್ಯನಿರ್ವಹಿಸತಕ್ಕದ್ದು.
5. ವಾರದಲ್ಲಿ ಕನಿಷ್ಠ ಒಂದು ದಿನ ಕಾರ್ಯನಿರ್ವಹಿಸಬೇಕು. ಬಾಕಿ ಪ್ರಕರಣಗಳ ಸಂಖ್ಯೆಗಳನ್ನು ಪರಿಶೀಲಿಸಿ ಸಿಟ್ಟಿಂಗ್‌ನ್ನು ಹೆಚ್ಚಿಸಬಹುದಾಗಿದೆ.
6. ತರಬೇತಿಯು ಕಡ್ಡಾಯ.
7. ಪ್ರತಿ ಸಿಟ್ಟಿಂಗ್‌ಗಾಗಿ ರೂ. 500/-ಗಳ ಸಿಟ್ಟಿಂಗ್ ಫೀ ನಿಗದಿಪಡಿಸಲಾಗಿದೆ.
8. ರಾಜ್ಯ ಸರ್ಕಾರವು ನಿಗದಿಪಡಿಸುವ ದರದಲ್ಲಿ ಪ್ರಯಾಣ ಭತ್ಯೆಯನ್ನು ನೀಡಲಾಗುತ್ತದೆ.
9. ಸಮಿತಿಯ ಅವಧಿಯಲ್ಲಿ ಖಾಲಿಯಾಗುವ ಸ್ಥಾನಗಳಿಗೆ ಕಾಯ್ದಿರಿಸಿರುವ ಪಟ್ಟಿಯಿಂದ ಅಥವಾ ಹೊಸದಾಗಿ ಆಯ್ಕೆ ಮಾಡುವ ಮೂಲಕ ಸದಸ್ಯರನ್ನು ಭರ್ತಿಮಾಡಲಾಗುವುದು. ಹಾಗೂ ಇವರ ಅವಧಿಯು ಸಮಿತಿಯ ಅವಧಿಗೆ ಸೀಮಿತವಾಗಿರುತ್ತದೆ.
10. ರಾಜೀನಾಮೆ ನೀಡಬೇಕಾಗಿದ್ದಲ್ಲಿ ಒಂದು ತಿಂಗಳ ಪೂರ್ವದಲ್ಲೇ ರಾಜೀನಾಮೆ ತಿಳುವಳಿಕೆಯನ್ನು ಆಯ್ಕೆ ಸಮಿತಿಯ ಸದಸ್ಯ ಕಾರ್ಯದರ್ಶಿ ಹಾಗೂ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ/ರಾಜ್ಯ ಸರ್ಕಾರಕ್ಕೆ ಸಲ್ಲಿಸಬೇಕಾಗಿರುತ್ತದೆ.
11. ಸಮಿತಿಯ ಸದಸ್ಯತ್ವವನ್ನು ಈ ಕೆಳಗಿನ ಕಾರಣಗಳಿಂದ ರದ್ದುಗೊಳಿಸಲು ಅವಕಾಶವಿರುತ್ತದೆ.

**ಯಾವ ಸದಸ್ಯರು :**

ಅ. ತಮ್ಮ ಅಧಿಕಾರ ದುರುಪಯೋಗ ಮಾಡಿಕೊಂಡ ದೋಷಿ ಎಂದು ಕಂಡು ಬಂದರೆ ;

ಆ. ತಮ್ಮ ಬುದ್ಧಿ ಸ್ಥಿಮಿತ ಕಳೆದು ಹೊಂಡಲ್ಲಿ ;

ಇ. ದಿವಾಳಿ ಎಂದು ಘೋಷಿಸಿದಲ್ಲಿ ;

ಈ. ಅಸ್ತಿತ್ವದಲ್ಲಿರುವ ಮಕ್ಕಳಿಗೆ ಮತ್ತು ಇತರೆ ಸಂಬಂಧಿತ ಕಾಯ್ದೆಗಳಡಿ ತಪ್ಪಿತಸ್ಥನೆಂದು ಕಂಡು ಬಂದಲ್ಲಿ ;

ಉ. ಸಕ್ರಿಯ ರಾಜಕಾರಣದಲ್ಲಿದ್ದಲ್ಲಿ ;

ಊ. ರಾಜ್ಯ ಸರ್ಕಾರದ ಗಮನಕ್ಕೆ ಸದರಿ ವ್ಯಕ್ತಿಯು ಸದಸ್ಯರಾಗಿ ಮುಂದುವರೆಯುವುದು ಅನಗತ್ಯವೆಂದು ಕಂಡು ಬಂದಲ್ಲಿ ವಿಚಾರಣೆ ನಡೆಸಿ ಸದಸ್ಯತ್ವದಿಂದ ತೆಗೆಯಲು ಅವಕಾಶವಿರುತ್ತದೆ.

ಋ. ನಿರಂತರವಾಗಿ ಯಾವುದೇ ಸಮಂಜಸ ಕಾರಣವಿಲ್ಲದೆ ಮೂರು ತಿಂಗಳು ಸಮಿತಿಯ ಕಲಾಪಗಳಿಗೆ ಭಾಗಹಿಸದಿದ್ದರೆ ಹಾಗೂ ಒಂದು ವರ್ಷದ ಒಟ್ಟು ಸಭೆಗಳಲ್ಲಿ ನಾಲ್ಕನೇ ಮೂರಕ್ಕಿಂತ ಕಡಿಮೆ ಸಭೆಗಳಿಗೆ ಹಾಜರಾಗಿದ್ದರೆ.

ಎ. ಬಾಲನ್ಯಾಯ ಕಾಯದೆ ಮತ್ತು ನಿಯಮಗಳಡಿ ಕಾರ್ಯನಿರ್ವಹಿಸತಕ್ಕದ್ದು.

ಏ. ಎಲ್ಲಾ ಸಮಯದಲ್ಲೂ ಮಗುವಿನ ಒಳಿತಿನ ಹಿನ್ನೆಲೆಯನ್ನು ಗಮನದಲ್ಲಟ್ಟು ಕೊಂಡೇ ಪ್ರಕರಣಗಳನ್ನು ನಿರ್ವಹಿಸತಕ್ಕದ್ದು.

ಒ. ಖಾಸಗಿ, ಸರ್ಕಾರಿ ಅಥವಾ ಸ್ವಯಂ ಸೇವಾ ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಲ್ಲಿ ಅವರ ಸಂಸ್ಥೆಯ ಮುಖ್ಯಸ್ಥರುಗಳಿಂದ ಮಕ್ಕಳ ಕಲ್ಯಾಣ ಸಮಿತಿ ಕಾರ್ಯನಿರ್ವಹಿಸಲು ಅನುಮತಿ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.

**ಸದಸ್ಯರುಗಳು ಪಾಲಿಸಬೇಕಾದ ನಡವಳಿಕೆಗಳು :**

1. ಮಕ್ಕಳೊಡನೆ ಸಂಭಾಷಿಸುವಾಗ ಅಥವಾ ಸಮಿತಿಯ ಸಿಟ್ಟಿಂಗ್ ಸಂದರ್ಭಗಳಲ್ಲಿ ಅಥವಾ ಸಂಸ್ಥೆಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಅಸಭ್ಯವಾದ ಮಾತುಗಳು/ಸಂಜ್ಞೆಗಳನ್ನು ಬಳಸತಕ್ಕದ್ದಲ್ಲ.
2. ಸಿಟ್ಟಿಂಗ್ ಸಂದರ್ಭ ಹೊರತು ಪಡಿಸಿ ಬೇರೆ ಸಮಯದಲ್ಲಿ ಅಧೀಕ್ಷಕರ ಅನುಮತಿಯಲ್ಲದೆ ಸಂಸ್ಥೆಗಳಿಗೆ ಭೇಟಿ ನೀಡತಕ್ಕದ್ದಲ್ಲ.
3. ಮಕ್ಕಳನ್ನು ಅವರುಗಳ ಜಾತಿ, ಧರ್ಮ, ಲಿಂಗ, ವರ್ಣ, ಪ್ರಬೇದಗಳ ಆಧರಿಸಿ ಭೇದ ತೋರಬಾರದು.
4. ಅಂಗವಿಕಲತೆ ಅಥವಾ ಅಡ್ಡ ಹೆಸರನ್ನು ಗುರುತಿಸಿ ಕರೆಯಬಾರದು.

**ಎಸ್. ಎನ್. ಕೃಷ್ಣಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ – 1,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

ಪಿ.ಆರ್. 294

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬಳ್ಳಾರಿ ಮಹಾನಗರ ಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಗೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ನಅಇ 167 ಎಸಿಬಿ 2010, ದಿನಾಂಕ : 13–08–2010 .
2. ಸರ್ಕಾರದ ಸುತ್ತೋಲೆ ಸಂಖ್ಯೆ : ನಅಇ 167 ಎಸಿಬಿ 2010, ದಿನಾಂಕ : 24–08–2010.
3. ಸರ್ಕಾರದ ಆದೇಶ ಸಂಖ್ಯೆ : ನಅಇ 54 ಎಬಿಸಿ 2010, ದಿನಾಂಕ : 26–11–2010.
4. ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಬಳ್ಳಾರಿ ಇವರ ಪತ್ರ ಸಂಖ್ಯೆ : ಜಿಅಕಾ/ಡಿಯುಡಿಸಿ/ಕ್ರಿಯೊ/09/2010–11, ದಿನಾಂಕ : 30–08–2010.
5. ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ ಇವರ ಏಕ ಕಡತ ಸಂಖ್ಯೆ : ಪೌನಿ/ತಾಂತ್ರಿಕ/ಬಳ್ಳಾರಿ/116 (ಭಾಗ–4)/09–10.
6. ಸರ್ಕಾರದ ಆದೇಶ ಸಂಖ್ಯೆ : ನಅಇ 43 ಎಬಿಸಿ 2010, ದಿನಾಂಕ 17–01–2011.
7. ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 20 ಇಜಿವಿ 2009 (4), ದಿನಾಂಕ : 13–07–2009.

**ಪ್ರಸ್ತಾವನೆ :**

ಮೇಲೆ ಉಲ್ಲೇಖ (1) ರಲ್ಲಿ ಓದಲಾದ ಸರ್ಕಾರದ ದಿನಾಂಕ 13–08–2010 ರ ಆದೇಶದಲ್ಲಿ ಬಳ್ಳಾರಿ ಮಹಾನಗರಪಾಲಿಕೆ ಸೇರಿದಂತೆ ರಾಜ್ಯದಲ್ಲಿನ 7 ಮಹಾನಗರ ಪಾಲಿಕೆಗಳಲ್ಲಿ 2ನೇ ಹಂತದಲ್ಲಿ ಅಭಿವೃದ್ಧಿ ಕಾಮಗಾರಿಗಳನ್ನು ತೆಗೆದುಕೊಳ್ಳಲು 2011–12 ರಿಂದ 2013–14 ರ ಆರ್ಥಿಕ ವರ್ಷಗಳಲ್ಲಿ ಪ್ರತಿ ಮಹಾನಗರ ಪಾಲಿಕೆಗೆ ತಲಾ ರೂ. 100 ಕೋಟಿಯಂತೆ ವಿಶೇಷ ಅನುದಾನವನ್ನು ಒದಗಿಸಲು ಕೆಲವು ಷರತ್ತುಗಳಿಗೊಳಪಟ್ಟು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ಸರ್ಕಾರದ ದಿನಾಂಕ : 24–08–2010 ರ ಸುತ್ತೋಲೆಯಲ್ಲಿ ರಾಜ್ಯದಲ್ಲಿನ 7 ಮಹಾನಗರ ಪಾಲಿಕೆಗಳಲ್ಲಿ 2ನೇ ಹಂತದಲ್ಲಿ ತೆಗೆದುಕೊಳ್ಳಲು ಉದ್ದೇಶಿಸಲಾಗಿರುವ ಅಭಿವೃದ್ಧಿ ಕಾಮಗಾರಿಗಳನ್ನು ಆಯ್ಕೆ ಮಾಡುವುದಕ್ಕೆ ಮತ್ತು ಅನುಷ್ಠಾನಗೊಳಿಸುವುದಕ್ಕೆ ಸಂಬಂಧಪಟ್ಟಂತೆ ಮಾರ್ಗದರ್ಶಿ ಸೂತ್ರಗಳನ್ನು ನೀಡಲಾಗಿದೆ.

3. ಮೇಲೆ (3) ರಲ್ಲಿ ಓದಲಾದ ಸರ್ಕಾರದ ದಿನಾಂಕ : 26–11–2010 ರ ಆದೇಶದಲ್ಲಿ ಬಳ್ಳಾರಿ ಮಹಾನಗರ ಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳ ಕ್ರಿಯಾ ಯೋಜನೆಗೆ ಕೆಲವು ಷರತ್ತುಗಳು ಮತ್ತು ಮೊತ್ತದ ಮಿತಿಗೊಳಪಟ್ಟು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

4. ಮೇಲೆ (4) ರಲ್ಲಿ ಓದಲಾದ ಪತ್ರದಲ್ಲಿ ಮತ್ತು (5) ರಲ್ಲಿ ಓದಲಾದ ಏಕಕಡತದಲ್ಲಿ ಸರ್ಕಾರಕ್ಕೆ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ ಬಳ್ಳಾರಿ ಮಹಾನಗರ ಪಾಲಿಕೆಯಲ್ಲಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಯನ್ನು ಸಲ್ಲಿಸಿ ಅದಕ್ಕೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ.

5. ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ನೀಡಿರುವ ಅನುಮೋದನೆ ಹಾಗೂ ಈಗ ಸರ್ಕಾರದ ಅನುಮೋದನೆ ಕೋರಿ ಸಲ್ಲಿಸಿರುವ ಕ್ರಿಯಾ ಯೋಜನೆ ಪಟ್ಟಿಯಲ್ಲಿನ ಕಾಮಗಾರಿಗಳ ಸ್ವರೂಪಗಳಲ್ಲಿನ ಮೊತ್ತದ ಮಿತಿಯಲ್ಲಿ ವ್ಯತ್ಯಾಸ ಇದ್ದು ಅದು ಈ ಕೆಳಕಂಡಂತೆ ಇರುತ್ತದೆ.

(ಮೊತ್ತ ಕೋಟಿ ರೂಪಾಯಿಗಳಲ್ಲಿ)

| ಕ್ರಮ ಸಂಖ್ಯೆ | ಕಾಮಗಾರಿಗಳ ಸ್ವರೂಪ | ನಿಗದಿತ ಕನಿಷ್ಠ / ಗರಿಷ್ಠ ಮಿತಿ | ಪ್ರಸ್ತಾವನೆ | ವ್ಯತ್ಯಾಸ |
|---|---|---|---|---|
| 1. | ರಸ್ತೆಗಳು, ರಸ್ತೆ ಬದಿ ಚರಂಡಿಗಳ ಅಭಿವೃದ್ಧಿ ಪಾದಾಚಾರಿ ಮಾರ್ಗ (Foot paths ಮತ್ತು ಪಾದಾಚಾರಿ ಸುರಂಗ ಮಾರ್ಗಗಳು (pedestrian underpass/Subways) | 55.00 | 72.10 | +17.00 |
| | **ವ್ಯತ್ಯಾಸಕ್ಕೆ ಕಾರಣ :** ಒಳಚರಂಡಿ ವ್ಯವಸ್ಥೆ ಮತ್ತು ಉದ್ಯಾನವನಗಳ ಅಭಿವೃದ್ಧಿಗೆ ಬೇರೆ ಯೋಜನೆಯಡಿಯಲ್ಲಿ ಕಾಮಗಾರಿಗಳನ್ನು ಕೈಗೊಂಡಿರುವ ಹಿನ್ನೆಲೆಯಲ್ಲಿ ಪ್ರಮುಖ ರಸ್ತೆಗಳ ನಿರ್ಮಾಣಕ್ಕೆ ಹೆಚ್ಚಿನ ಆದ್ಯತೆ ನೀಡಲಾಗಿದೆ. | | | |
| 2. | ಒಳಚರಂಡಿ ವ್ಯವಸ್ಥೆ ವಿತರಣಾ ಜಾಲ/ಲ್ಯಾಟರಲ್ಸ್ ಕಾಮಗಾರಿಗಳು ಹಾಗೂ ಇತರೆ ಯುಜಿಡಿ ಕಾಮಗಾರಿಗಳು | 10.00 | 3.24 | –6.76 |
| | **ವ್ಯತ್ಯಾಸಕ್ಕೆ ಕಾರಣ :** ಒಳಚರಂಡಿ ಕಾಮಗಾರಿಗಳಿಗಾಗಿ ರೂ. 322 ಲಕ್ಷಗಳಿಗೆ ಅಳವಡಿಸಲಾಗಿದೆ. ಇದು ಅಲ್ಲದೇ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ ವತಿಯಿಂದ ರೂ. 626 ಲಕ್ಷ ಅಂದಾಜಿನಲ್ಲಿ ಕಾಮಗಾರಿಗಳು ಪ್ರಗತಿಯಲ್ಲಿದೆ ಎಂದು ಆಯುಕ್ತರು, ಬಳ್ಳಾರಿ ಮಹಾನಗರಪಾಲಿಕೆ ಇವರು ವರದಿ ಮಾಡಿರುತ್ತಾರೆ | | | |
| 3. | ಸಂಚಾರ ವ್ಯವಸ್ಥೆ ಸುಧಾರಣೆ ಕಾಮಗಾರಿಗಳು (Traffic management improvement works such as VEHICLE ACTUATED SIGNAL (Solar/UPS) Integrated with surveillance enforcement cameras) | 5.00 | 1.54 | –3.47 |
| 4. | ಘನತ್ಯಾಜ್ಯ ವಸ್ತು ನಿರ್ವಹಣೆ ಸಂಬಂಧಿತ Land Fill site ಅಭಿವೃದ್ಧಿ ಕಾಮಗಾರಿಗಳು, ನಗರ ಸ್ವಚ್ಚತೆ ನಿರ್ವಹಣೆ ಸಂಬಂಧಿತ ಯಂತ್ರೋಪಕರಣಗಳು, ಮಳೆ ನೀರು ಚರಂಡಿ ಕಾಮಗಾರಿಗಳು, ವಿದ್ಯುತ್ ಬೀದಿ ದೀಪಗಳ ಅಳವಡಿಕೆ ಹಾಗೂ ಇಂಧನ ಉಳಿತಾಯ ಕಾಮಗಾರಿಗಳು ಮತ್ತು ಇತರೆ ಮೂಲಭೂತ ಸೌಕರ್ಯ ಅಭಿವೃದ್ಧಿ ಕಾಮಗಾರಿಗಳು | 20.00 | 20.62 | +0.62 |
| | **ವ್ಯತ್ಯಾಸಕ್ಕೆ ಕಾರಣ :** ರೂ. 20.62 ಕೋಟಿಯಲ್ಲಿ ರೂ. 2.50 ಕೋಟಿ ಕನ್ಸಲ್‌ಟೆಂಟ್ ಫಿ ಹಾಗೂ ರೂ. 0.43 ಕೋಟಿ ಮೂರನೇ ಪಾರ್ಟಿ ತಪಾಸಣಾ ವೆಚ್ಚಕ್ಕೆ ಮೀಸಲಿಡಲಾಗಿದೆ. | | | |

| | | | | |
|---|---|---|---|---|
| 5. | ಉದ್ಯಾನವನಗಳ ನಿರ್ಮಾಣ/ಅಭಿವೃದ್ಧಿ ಮತ್ತು ನಗರ ಅರಣ್ಯೀಕರಣ | 10.00 | 1.48 | –8.52 |
| | **ವ್ಯತ್ಯಾಸಕ್ಕೆ ಕಾರಣ :** ಉದ್ಯಾನವನಗಳ ಅಭಿವೃದ್ಧಿ ಕಾಮಗಾರಿಗಳನ್ನು ಜಿಂದಾಲ್ ಕಾರ್ಖಾನೆಯಿಂದ ಕೈಗೊಳ್ಳಲು ಉದ್ದೇಶಿಸಲಾಗಿದೆ ಎಂದು ಆಯುಕ್ತರು, ಬಳ್ಳಾರಿ ಮಹಾನಗರಪಾಲಿಕೆ ಇವರು ವರದಿ ಮಾಡಿ ರೂ. 1.48 ಕೋಟಿಗೆ ಅರಣ್ಯೀಕರಣಕ್ಕೆ ಅವಕಾಶವನ್ನು ಕಲ್ಪಿಸಲಾಗಿದೆ. | | | |
| 6. | Contingencies | 0.00 | 1.02 | +1.02 |
| | ಒಟ್ಟು ... | 100.00 | 100.00 | |

6. ಮೇಲೆ (6) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಳ್ಳಾರಿ ಮಹಾನಗರಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ರೂ. 100 ಕೋಟಿ ಮೊತ್ತದ ಕಾಮಗಾರಿಗಳನ್ನು ಈ ಆರ್ಥಿಕ ವರ್ಷದಲ್ಲಿಯೇ ಕೈಗೆತ್ತಿಕೊಳ್ಳಲು ಮತ್ತು ರೂ. 15 ಕೋಟಿ ಮೊತ್ತವನ್ನು ಕಾಮಗಾರಿಗಳ ತೃಪ್ತಿಕರ ಪ್ರಗತಿ ಪರಿಗಣಿಸಿ ಹಂತ ಹಂತವಾಗಿ 2010–11 ರ ಆರ್ಥಿಕ ವರ್ಷದಲ್ಲಿ ಬಿಡುಗಡೆ ಮಾಡಲು ಕೆಲವು ಷರತ್ತುಗಳಿಗೊಳಪಟ್ಟು ಅನುಮೋದನೆ ನೀಡಲಾಗಿದೆ.

7. ಮೇಲೆ (7) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಬಳ್ಳಾರಿ ಮಹಾನಗರಪಾಲಿಕೆ ಸೇರಿದಂತೆ ರಾಜ್ಯದಲ್ಲಿನ ಮಹಾನಗರಪಾಲಿಕೆಗಳಲ್ಲಿ ರೂ. 10 ಲಕ್ಷಕ್ಕೆ ಮೀರಿದ ಎಲ್ಲಾ ರೀತಿಯ ಸಾರ್ವಜನಿಕ ಸಂಗ್ರಹಣೆಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪ್ಲಾಟ್ ಫಾರಂ ಮುಖಾಂತರ ಕೈಗೊಳ್ಳುವಂತೆ ಆದೇಶಿಸಲಾಗಿದೆ.

8. ಅದರಂತೆ ಪ್ರಸ್ತಾವನೆಯನ್ನು ಪರಿಗಣಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 54 ಎಬಿಸಿ 2010, ಬೆಂಗಳೂರು, ದಿನಾಂಕ: 18–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬಳ್ಳಾರಿ ಮಹಾನಗರಪಾಲಿಕೆಯಲ್ಲಿ ರೂ. 100 ಕೋಟಿ ವಿಶೇಷ ಅನುದಾನದ ಯೋಜನೆ ಅಡಿ 2ನೇ ಹಂತದಲ್ಲಿ ಕೈಗೊಳ್ಳಲು ಉದ್ದೇಶಿಸಿರುವ ಈ ಕೆಳಕಂಡ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರಮ ಸಂಖ್ಯೆ | ಕ್ಷೇತ್ರ | ಕಾಮಗಾರಿ ಹೆಸರು | ಉದ್ದ ಕಿ.ಮೀ. | ಮೊತ್ತ ರೂ. |
|---|---|---|---|---|
| | | ಮುಂದುವರೆದ ಕಾಮಗಾರಿಗಳು | | |
| 1. | | ನಗರದ ತೇರು ಬೀದಿಯನ್ನು ಮೋತಿ ವೃತ್ತದಿಂದ ಕನೇಕಲ್ ಬಸ್ ನಿಲ್ದಾಣದವರೆಗೆ ಅಗಲೀಕರಿಸಿ ಅಭಿವೃದ್ಧಿಪಡಿಸುವುದು | 1.00 | 330.67 |
| 2. | | ನಗರದ ಕಾಳಮ್ಮ ಬೀದಿಯನ್ನು ವೆಟನರಿ ಆಸ್ಪತ್ರೆಯಿಂದ ಭಾರತ್ ಬಿಸ್ಕತ್ ಫ್ಯಾಕ್ಟರಿವರೆಗೆ ಅಗಲೀಕರಿಸಿ ಅಭಿವೃದ್ಧಿಪಡಿಸುವುದು | 0.78 | 273.50 |
| 3. | | ನಗರದ ದುರ್ಗಮ್ಮ ವೃತ್ತದಿಂದ ಎಸ್.ಪಿ. ವೃತ್ತದವರೆಗೆ ಹಾಲಿ ಎಲ್.ಟಿ. ಓವರ್‌ಹೆಡ್ ಲೈನನ್ನು ಎಲ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 20.68 |
| 4. | | ನಗರದ ದುರ್ಗಮ್ಮ ವೃತ್ತದಿಂದ ಎಸ್.ಪಿ. ವೃತ್ತದವರೆಗೆ 11 ಕೆ.ವಿ. ಹೆಚ್.ಟಿ. ಓವರ್‌ಹೆಡ್ ಲೈನನ್ನು ಎಲ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 8.86 |
| 5. | | ನಗರದ ಎಸ್.ಪಿ. ವೃತ್ತದಿಂದ ಫೈರ್ ಸ್ಟೇಷನ್‌ವರೆಗೆ ಹಾಲಿ ಎಲ್.ಟಿ. ಓವರ್‌ಹೆಡ್ ಲೈನನ್ನು ಎಲ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 16.13 |
| 6. | | ನಗರದ ಎಸ್.ಪಿ. ವೃತ್ತದಿಂದ ಫೈರ್ ಸ್ಟೇಷನ್‌ವರೆಗೆ ಹಾಲಿ 11 ಕೆ.ವಿ. ಹೆಚ್.ಟಿ. ಓವರ್‌ಹೆಡ್ ಲೈನನ್ನು ಹೆಚ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 16.69 |
| 7. | | ನಗರದ ಫೈರ್ ಸ್ಟೇಷನ್‌ದಿಂದ ಓ.ಪಿ.ಡಿ. ವೃತ್ತದವರೆಗೆ ಹಾಲಿ ಎಲ್.ಟಿ. ಓವರ್‌ಹೆಡ್ ಲೈನನ್ನು ಎಲ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 40.15 |
| 8. | | ನಗರದ ಫೈರ್ ಸ್ಟೇಷನ್‌ದಿಂದ ಓ.ಪಿ.ಡಿ. ವೃತ್ತದವರೆಗೆ ಹಾಲಿ 11 ಕೆ.ವಿ. ಹೆಚ್.ಟಿ. ಓವರ್‌ಹೆಡ್ ಲೈನನ್ನು ಹೆಚ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 16.69 |
| 9. | | ನಗರದ ಇಂದಿರಾ ವೃತ್ತದಿಂದ ಎಸ್. ಎನ್. ಪೇಟೆ ರಸ್ತೆಗೆ ಹಾಲಿ ಎಲ್.ಟಿ. ಓವರ್‌ಹೆಡ್ ಲೈನನ್ನು ಎಲ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 1.42 |
| 10. | | ನಗರದ ಇಂದಿರಾ ವೃತ್ತದಿಂದ ಎಸ್. ಎನ್. ಪೇಟೆ ರಸ್ತೆಗೆ ಹಾಲಿ 11 ಕೆ.ವಿ. ಹೆಚ್.ಟಿ. ಓವರ್‌ಹೆಡ್ ಲೈನನ್ನು ಹೆಚ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 49.63 |
| 11. | | ನಗರದ 1ನೇ ರೈಲ್ವೆಗೇಟ್‌ನಿಂದ ಸುಧಾ ಕ್ರಾಸ್‌ವರೆಗೆ 11 ಕೆ.ವಿ. ಹೆಚ್.ಟಿ. ಓವರ್‌ಹೆಡ್ ಲೈನನ್ನು ಹೆಚ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 72.86 |
| 12. | | ನಗರದ 1ನೇ ರೈಲ್ವೆಗೇಟ್‌ನಿಂದ ಟಿ.ಬಿ. ಆಸ್ಪತ್ರೆವರೆಗೆ ಎಲ್.ಟಿ. ಓವರ್‌ಹೆಡ್ ಲೈನನ್ನು ಎಲ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 78.80 |
| 13. | | ನಗರದ 1ನೇ ರೈಲ್ವೆಗೇಟ್‌ನಿಂದ ಟಿ.ಬಿ. ಆಸ್ಪತ್ರೆವರೆಗೆ 11 ಕೆ.ವಿ. ಹೆಚ್.ಟಿ. ಓವರ್‌ಹೆಡ್ ಲೈನನ್ನು ಹೆಚ್.ಟಿ. ಅಂಡರ್‌ಗ್ರೌಂಡ್ ಕೇಬಲ್‌ಗೆ ಬದಲಾಯಿಸುವುದು. | | 52.53 |
| ಎ | | **ಒಟ್ಟು ಸ್ಪಿಲ್ ಓವರ್ ವರ್ಕ್ಸ್ ಮೊತ್ತ** | **1.78** | **978.61** |

| | | | | |
|---|---|---|---|---|
| | | **ಹೊಸ ಕಾಮಗಾರಿಗಳು ಪ್ಯಾಕೇಜ್–1** | | |
| 1. | 93 | ನಗರದ ದೋಬಿ ಬೀದಿ, ಕೌಲ್ ಬಜಾರ್‌ಯಿಂದ ಬಂಡಿಹಟ್ಟಿವರೆಗೆ ಅಗಲೀಕರಿಸಿ ಅಭಿವೃದ್ಧಿಪಡಿಸುವುದು | 1.10 | 261.50 |
| 2. | 93 | ನಗರದ ಜವಾರಿ ಬೀದಿ, ಕೌಲ್ ಬಜಾರ್ ಮುಖ್ಯರಸ್ತೆಯಿಂದ ಬೈಪಾಸ್ ರಸ್ತೆವರೆಗೆ ಅಗಲೀಕರಿಸಿ ಅಭಿವೃದ್ಧಿಪಡಿಸುವುದು | 0.65 | 189.97 |
| 3. | 93 | ನಗರದ ಗಡಂಗ್ ಬೀದಿ, ಕೌಲ್ ಬಜಾರ್ ಮುಖ್ಯರಸ್ತೆಯಿಂದ ಹಳೇ ಮಾರುಕಟ್ಟೆವರೆಗೆ ಅಗಲೀಕರಿಸಿ ಅಭಿವೃದ್ಧಿಪಡಿಸುವುದು | 1.10 | 262.50 |
| 4. | 93 | ನಗರದ ಕ್ರಿಶ್ಚಿಯನ್ ಸ್ಮಶಾನ, ಕೌಲ್‌ಬಜಾರ್ ಮುಖ್ಯರಸ್ತೆಯಿಂದ ಬೈಪಾಸ್ ರಸ್ತೆವರೆಗೆ ಅಗಲೀಕರಿಸಿ ಅಭಿವೃದ್ಧಿಪಡಿಸುವುದು. | 1.10 | 212.83 |
| 5. | 93 | ನಗರದ ಓ.ಪಿ.ಡಿ ರಸ್ತೆ, ಓ.ಪಿ.ಡಿ. ವೃತ್ತದಿಂದ ಕೊಳಗಲ್ ರಸ್ತೆವರೆಗೆ (ಸುಧಾಕ್ರಾಸ್) ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 0.85 | 742.19 |
| 6. | 93 | ನಗರದ ಟೈಲರ್ ಬಿದಿ 2ನೇ ಗೇಟ್ ನಿಂದ ಕೌಲ್ ಬಜಾರ್ ಮುಖ್ಯ ರಸ್ತೆವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 0.75 | 149.79 |
| 7. | 93 | ನಗರದ ಬಂಡಿಹಟ್ಟಿ ರಸ್ತೆ ಬಳಗಲ್ ಕ್ರಾಸ್ ದಿಂದ ಬಂಟಿಹಟ್ಟಿ ಮುಖ್ಯ ರಸ್ತೆವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 1.00 | 285.49 |
| 8. | 93 | ನಗರದ ಕೋಟೆ ಮುಖ್ಯ ರಸ್ತೆ ರಿಬ್ಲಿಕ್ ವೃತ್ತದಿಂದ ರಾ.ಹೆ. 63, ವಯಾ ಪಿ.ಡಬ್ಲ್ಯೂ.ಡಿ. ಕಛೇರಿ ರಸ್ತೆಯನ್ನು ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 1.30 | 404.73 |
| 9. | 93 | ನಗರದ ಇನ್‌ಫೆಂಟ್ರಿ ರಸ್ತೆಯ, ಇನ್‌ಫೆಂಟ್ರಿ ಮುಖ್ಯರಸ್ತೆಯಿಂದ ಕೌಲ್ ಬಜಾರ್ ಮುಖ್ಯ ರಸ್ತೆವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 1.40 | 348.85 |
| 10. | 93 | ನಗರದ ದೋಡ್ಡಿ ಬೀದಿಯನ್ನು ರೇಡಿಯೊ ಪಾರ್ಕ್ ಮುಖ್ಯ ರಸ್ತೆಯಿಂದ ಕೌಲ್‌ಬಜಾರ್ ಮುಖ್ಯ ರಸ್ತೆವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 0.55 | 116.98 |
| 11. | 93 | ನಗರದ ಮೋರ್ ಗಲ್ಲಿ ಬೀದಿಯನ್ನು ಬಂಡಿಹಟ್ಟಿ ರಸ್ತೆಯಿಂದ ದೋಬಿ ಬೀದಿವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 1.20 | 220.27 |
| ಬಿ | | **93 ಕ್ಷೇತ್ರದ ಒಟ್ಟು ಮೊತ್ತ** | **11.00** | **3195.13** |
| | | ಹೊಸ ಕಾಮಗಾರಿಗಳು ಪ್ಯಾಕೇಜ್–2 | | |
| 1. | 94 | ನಗರದ ಕಪ್ಪಗಲ್ ರಸ್ತೆಯನ್ನು ದುರ್ಗಮ್ಮ ವೃತ್ತದಿಂದ ಕೆನಾಲ್‌ವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು | 1.50 | 442.36 |
| 2. | 94 | ನಗರದ ಇಂದಿರಾ ನಗರ ರಸ್ತೆಯನ್ನು ಫೈರ್‌ಸ್ಟೇಷನ್ ವೃತ್ತದಿಂದ ಓ.ಪಿ.ಡಿ. ಕ್ರಾಸ್‌ವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 1.52 | 498.74 |
| 3. | 94 | ನಗರದ ಬಾಂಬೆಪ್ರೆಸ್ ರಸ್ತೆಯನ್ನು ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು | 0.62 | 179.08 |
| 4. | 94 | ನಗರದ ಕಾಳಮ್ಮ ಬೀದಿಯನ್ನು ವೆಟನರಿ ಆಸ್ಪತ್ರೆಯಿಂದ ಭಾರತ್ ಬಿಸ್ಕತ್ ಫ್ಯಾಕ್ಟರಿವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು ಚೈನೇಜ್ 775 ರಿಂದ 975 ವರೆಗೆ | 0.20 | 78.64 |
| 5. | 94 | ನಗರದ ತೇರು ಬೀದಿಯನ್ನು ದೊಡ್ಡ ಮಾರುಕಟ್ಟೆಯಿಂದ ಕನೇಕಲ್ ಬಸ್ ನಿಲ್ದಾಣದವರೆಗೆ ಅಗಲೀಕರಿಸಿ ಅಭಿವೃದ್ಧಿಪಡಿಸುವುದು ಚೈನೇಜ್ 1000 ರಿಂದ 1440 ವರೆಗೆ | 0.44 | 157.26 |
| 6. | 94 | ನಗರದ ಹಳೇ ಧಾರವಾಡ ರಸ್ತೆಯಲ್ಲಿ ಕುಟ್ಟಿ ಹೋಟೆಲ್‌ನಿಂದ ಫೈರ್ ಸ್ಟೇಷನ್ ವೃತ್ತದವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 1.25 | 338.61 |

| | | | | |
|---|---|---|---|---|
| 7. | 94 | ನಗರದ ಗಾಂಧಿನಗರ 1ನೇ ಕ್ರಾಸ್, ಗೋಪಾಲಸ್ವಾಮಿ ರಸ್ತೆಯಿಂದ ಸಂಗನಕಲ್ ರಸ್ತೆವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು | 1.00 | 273.23 |
| 8. | 94 | ನಗರದ ತಾಳೂರು ರಸ್ತೆಯನ್ನು ಪಾರ್ವತಿ ನಗರ ಮುಖ್ಯರಸ್ತೆಯಿಂದ ಮಹಾನಗರಪಾಲಿಕೆ ಹದ್ದಿನವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು | 1.75 | 861.61 |
| 9. | 94 | ನಗರದ ಗಾಂಧಿನಗರ 3ನೇ ಕ್ರಾಸ್, ಗೋಪಾಲಸ್ವಾಮಿ ರಸ್ತೆಯಿಂದ ಸಂಗನಕಲ್ ರಸ್ತೆ ವಯಾ ಬಾಲಭಾರತಿವರೆಗೆ ಅಗಲೀಕರಿಸಿ ಅಭಿವೃದ್ಧಿಪಡಿಸುವುದು | 0.83 | 216.37 |
| 10. | 94 | ನಗರದ ನೆಹರೂ ಕಾಲೋನಿ 1ನೇ ಕ್ರಾಸ್ ರಸ್ತೆಯನ್ನು ಸಂಗನಕಲ್ ರಸ್ತೆಯಿಂದ ಅಂತ್ಯದವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 0.65 | 203.60 |
| 11. | 94 | ನಗರದ ಮುಲ್ಲಂಗಿ ಸಂಜೀವಪ್ಪ ಬೀದಿಯನ್ನು ತೇರು ಬೀದಿಯಿಂದ ರೂಪನಗುಡಿ ರಸ್ತೆವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 0.55 | 161.80 |
| 12. | 94 | ನಗರದ ಗೋಲ್ಡ್‌ಸ್ಮಿತ್ ಬೀದಿಯನ್ನು ಭಾರತ್ ಬಿಸ್ಕತ್ ಫ್ಯಾಕ್ಟರಿಯಿಂದ ಬಾಂಬೆಪ್ರೆಸ್ ರಸ್ತೆ ಕ್ರಾಸ್‌ವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು | 1.25 | 499.03 |
| 13. | 94 | ನಗರದ ಕಮ್ಮಿಂಗ್ ರಸ್ತೆ ರೂಪನಗುಡಿ ರಸ್ತೆಯಿಂದ ತೇರು ಬೀದಿವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು | 0.50 | 119.23 |
| 14. | 94 | ನಗರದ ಶಾಸ್ತ್ರೀ ನಗರ 1ನೇ ಕ್ರಾಸ್ ರಸ್ತೆಯನ್ನು ಎಸ್.ಪಿ. ವೃತ್ತದಿಂದ ಅಂತ್ಯದವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು. | 0.90 | 239.16 |
| 15. | 94 | ನಗರದ ಶಾಸ್ತ್ರೀ ನಗರ 2ನೇ ಕ್ರಾಸ್ ಅವಂಬಾವಿ ರಸ್ತೆಯಿಂದ ಅಂತ್ಯದವರೆಗೆ ಅಗಲೀಕರಿಸಿ ಅಭಿವೃದ್ಧಿ ಪಡಿಸುವುದು | 0.40 | 106.47 |
| ಸಿ | | **94 ಕ್ಷೇತ್ರದ ಒಟ್ಟು ಮೊತ್ತ** | | **4375.19** |
| | | **ಹೊಸ ಕಾಮಗಾರಿಗಳು ಪ್ಯಾಕೇಜ್–3** | | |
| 1 | | ಸಮಾಲೋಚಕರ ಶುಲ್ಕ | | 256.47 |
| **ಡಿ** | | **ಒಟ್ಟು ಮೊತ್ತ** | | **256.47** |
| | | **ಹೊಸ ಕಾಮಗಾರಿಗಳು ಪ್ಯಾಕೇಜ್–4** | | |
| 1 | | 3ನೇ ತಪಾಸಣೆ ಪಕ್ಷ ಶುಲ್ಕ | | 42.74 |
| **ಇ** | | **ಒಟ್ಟು ಮೊತ್ತ** | | **42.74** |
| | | ಇತರೆ ಕಾಮಗಾರಿಗಳು | | |
| 1 | | ನಗರದ ಹನುಮಾನ್ ನಗರ ಕಾಂಪೋಸ್ಟ್ ಯಾರ್ಡ್ ವರಬಸಪ್ಪ ಗುಡಿ ಹತ್ತಿರ ಮಳೆ ನೀರಿನ ಚರಂಡಿ ನಿರ್ಮಾಣ | | 100.00 |
| 2 | | ನಗರದ ಆರ್.ಟಿ.ಓ. ರಸ್ತೆ, ಕೆ.ಇ.ಬಿ. ಕಛೇರಿ ಮುಂಭಾಗದಿಂದ ಪಟೇಲ್ ಮನೆವರೆಗೆ ಮಳೆ ನೀರಿನ ಚರಂಡಿ ನಿರ್ಮಾಣ | | 25.00 |
| 3 | | ನಗರದ ಎಸ್.ಎನ್. ಪೇಟೆ ರಸ್ತೆ, ದ್ವಾರಕ ಆರ್ಮ್ಸ್ ಫ್ಯಾಕ್ಟರಿ ಹತ್ತಿರ ಮಳೆ ನೀರಿನ ಚರಂಡಿ ನಿರ್ಮಾಣ | | 50.00 |
| 4 | | ನಗರದ ಕಂಟೋನ್ಮೆಂಟ್ ಸಿದ್ದಾರ್ಥ ನಗರ ಹತ್ತಿರ ಮಳೆ ನೀರಿನ ಚರಂಡಿ ನಿರ್ಮಾಣ | | 25.00 |
| 5 | | ನಗರದ ರಾ.ಹೆ.–63 (ಹೊಸಪೇಟೆ ರಸ್ತೆ, ಬೆಂಗಳೂರು ರಸ್ತೆ ಮತ್ತು ಅನಚಿತಮರ ರಸ್ತೆ) ಬೀದಿ ದೀಪ ಮತ್ತು ವಿದ್ಯುತ್ ಲೈನ್ ಅಳವಡಿಸುವುದು. | | 100.00 |
| 6 | | ನಗರದ 20 ವಿವಿಧ ಸ್ಥಳಗಳಲ್ಲಿ ಹೈಮಾಸ್ಟ್ ಲೈಟನ್ನು ಅಳವಡಿಸುವುದು. | | 100.00 |

| | | | | |
|---|---|---|---|---|
| 7 | | ನಗರದ ವಿವಿಧ ಸ್ಥಳಗಳಲ್ಲಿ ಟ್ರಾಫಿಕ್ ಸಿಗ್ನಲ್‌ಗಳನ್ನು ಅಳವಡಿಸುವುದು | | 100.00 |
| 8 | | ನಗರದ ವಡ್ಡರಬಂಡ ಗುಡಿ ಪ್ರದೇಶದಲ್ಲಿ ಮಳೆ ನೀರಿನ ಚರಂಡಿ ನಿರ್ಮಾಣ | | 50.00 |
| 9 | | ನಗರದ ಉದ್ಯಾನವನಗಳನ್ನು ಅಭಿವೃದ್ಧಿಪಡಿಸುವುದು | | 100.00 |
| 10 | | ನಗರದ ಹೊಸ ಲ್ಯಾಂಡ್‌ಫೀಲ್ ಸೈಟ್‌ನಲ್ಲಿ ರಸ್ತೆ ನಿರ್ಮಾಣ ಮಾಡುವುದು | | 100.00 |
| 11 | | ನಗರವನ್ನು ಸ್ವಚ್ಚಗೊಳಿಸಲು ಹೊಸ ವಾಹನಗಳನ್ನು ಖರೀದಿಸುವುದು | | 300.00 |
| **ಎಫ್** | | **ಇತರೆ ಕಾಮಗಾರಿಗಳ ಒಟ್ಟು ಮೊತ್ತ** | | **1050.00** |
| **ಎಲ್ಲಾ ಕಾಮಗಾರಿಗಳ ಒಟ್ಟು ಮೊತ್ತ (ಎ+ಬಿ+ಸಿ+ಡಿ+ಇ+ಎಫ್)** | | | | **9898.14** |
| ಕಂಟಿನ್‌ಜೆನ್ಸಿ | | | | 101.86 |
| **ಒಟ್ಟು ಮೊತ್ತ** | | | | **10000.00** |

2. ಈ ಅನುಮೋದನೆಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

   1. ಈ ಅನುಮೋದನೆಯನ್ನು ಕಾಮಗಾರಿಗಳ ಪಟ್ಟಿಗೆ ಮಾತ್ರ ನೀಡಲಾದ ಅನುಮೋದನೆ ಎಂದು ಪರಿಗಣಿಸುವುದು. ಈ ಅನುಮೋದನೆಯನ್ನು ಕಾಮಗಾರಿಗಳ ಪಟ್ಟಿಗೆ ಅಥವಾ ಪಟ್ಟಿಯಲ್ಲಿನ ಯಾವುದೇ ಕಾಮಗಾರಿಗೆ ನೀಡಿರುವ ಆಡಳಿತಾತ್ಮಕ ಅನುಮೋದನೆ ಎಂದು ಪರಿಗಣಿಸುವಂತಿಲ್ಲ.
   2. ಸರ್ಕಾರದ ಆದೇಶ ಸಂಖ್ಯೆ : ನಅಇ 167 ಎಸಿಬಿ 2010, ದಿನಾಂಕ 13/8/2010 ರಲ್ಲಿ ಹೇಳಲಾದ ಸೂಚನೆ/ಷರತ್ತುಗಳನ್ನು ಪಾಲಿಸುವುದು.
   3. ಸರ್ಕಾರದ ಆದೇಶ ಸಂಖ್ಯೆ : ನಅಇ 54 ಎಬಿಸಿ 2010, ದಿನಾಂಕ 26/11/2010 ರಲ್ಲಿ ಹೇಳಲಾದ ಸೂಚನೆ/ಷರತ್ತುಗಳನ್ನು ಪಾಲಿಸುವುದು.
   4. ಕರ್ನಾಟಕ ಪೌರನಿಗಮಗಳ ನಿಯಮಗಳು, 1977ರಲ್ಲಿ ನೀಡಲಾಗಿರುವ ಸೂಚನೆಗಳಂತೆ ಪ್ರತಿ ಕಾಮಗಾರಿಯ ಅಂದಾಜು ಪಟ್ಟಿಯನ್ನು ತಯಾರಿಸಿ ಅದಕ್ಕೆ ಸಕ್ಷಮ ಪ್ರಾಧಿಕಾರದಿಂದ ಆಡಳಿತಾತ್ಮಕ ಅನುಮೋದನೆಯನ್ನು ಟೆಂಡರ್/ಇ–ಪ್ರೊಕ್ಯೂರ್ ಮೆಂಟ್ ಪ್ರಕ್ರಿಯೆ ಪ್ರಾರಂಭಿಸುವ ಮೊದಲು ಕಡ್ಡಾಯವಾಗಿ ಪಡೆದುಕೊಳ್ಳತಕ್ಕದ್ದು.
   5. ರೂಪಾಯಿ ಎರಡು ನೂರು ಲಕ್ಷ ಮೀರಿರುವ ಕಾಮಗಾರಿಯ ಅಂದಾಜು ಪಟ್ಟಿಗಳಿಗೆ ಸರ್ಕಾರದ ಹಂತದಲ್ಲಿ ಕಡ್ಡಾಯವಾಗಿ ಆಡಳಿತಾತ್ಮಕ ಅನುಮೋದನೆ ಪಡೆದುಕೊಳ್ಳುವುದು.
   6. ಈ ಅನುದಾನದ ಅಡಿ ಕಾಮಗಾರಿಗಳನ್ನು ನಿರ್ವಹಿಸುವ ಸಲುವಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ಅದರಡಿ ರಚಿಸಿರುವ ನಿಯಮಗಳು ಮತ್ತು ಹೊರಡಿಸಲಾದ ಸೂಚನೆಗಳಲ್ಲಿನ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಆಸುಇ 20 ಇಜಿವಿ 2009 (4), ದಿನಾಂಕ 13/7/2009 ರಲ್ಲಿನ ಎಲ್ಲಾ ಅಂಶಗಳನ್ನು ಮತ್ತು ಕಟ್ಟುನಿಟ್ಟಾಗಿ ಪಾಲಿಸಿ ಟೆಂಡರ್ ಪ್ರಕ್ರಿಯೆಯನ್ನು ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕಡ್ಡಾಯವಾಗಿ ಕೈಗೊಳ್ಳುವುದು.

3. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 2008, ದಿನಾಂಕ 16/5/2008ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರದತ್ತವಾಗಿರುವ ಅಧಿಕಾರದ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಆರ್. ಮಹೇಶ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ (ಮಹಾನಗರಪಾಲಿಕೆ–2)

ಪಿ.ಆರ್.295

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ, ಇವರಿಗೆ ಮೊದಲನೆಯ ವಾರ್ಷಿಕ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ, ಇವರ ಪತ್ರ ಸಂಖ್ಯೆ:ಸಂ/ಕಂ/ಸಿಬ್ಬಂದಿ–2/240/2010–11, ದಿನಾಂಕ: 07–06–2010. ಮತ್ತು 22–10–2010.
2. ಮಹಾಲೇಖಪಾಲರು, (ಎ ಮತ್ತು ಇ) ಕರ್ನಾಟಕ, ಬೆಂಗಳೂರು, ಇವರ ಪತ್ರ ಸಂ: ಜಿಇ 1/ಆರ್ 5/ Vol-536/2010–11/971, ದಿನಾಂಕ: 09–09–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ಜಿಲ್ಲಾಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ, ಇವರ ದಿನಾಂಕ: 07–06–2010ರ ಪತ್ರದಲ್ಲಿ ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ, ಇವರ ವೇತನ ಶ್ರೇಣಿಯು ರೂ. 11400–21600 ವೇತನ ಗರಿಷ್ಠ ಮಟ್ಟಕ್ಕೆ ತಲುಪಿದ್ದು, ದಿನಾಂಕ: 01–12–2009 ರಿಂದ ಮೊದಲನೆಯ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವ ಕುರಿತು ಸದರಿಯವರ

ವಿರುದ್ಧ ಯಾವುದೇ ಇಲಾಖಾ ವಿಚಾರಣಾ ಬಾಕಿ ಇರುವುದಿಲ್ಲ. ಆದ್ದರಿಂದ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಪಿ 96, ದಿನಾಂಕ: 18–03–1996 ರನ್ವಯ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು, ರವರು ದಿನಾಂಕ: 09–09–2010 ರ ಪತ್ರದಲ್ಲಿ ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ, ಇವರ ವೇತನ ಶ್ರೇಣಿ 11400–21600 ವೇತನ ಗರಿಷ್ಠ ಮಟ್ಟಕ್ಕೆ ತಲುಪಿದ್ದು, ಇವರಿಗೆ ದಿನಾಂಕ: 01–12–2009 ರಿಂದ ಮೊದಲನೆ ಸ್ಥಗಿತ ವೇತನ ಬಡ್ತಿಯನ್ನು ಪಡೆಯಲು ಅರ್ಹರಿರುವುದರಿಂದ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡುವುದರ ಬಗ್ಗೆ ತಿಳಿಸಿರುತ್ತಾರೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 419 ಎಎಸ್‌ಡಿ 2010 ಬೆಂಗಳೂರು, ದಿನಾಂಕ: 06–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಮಧುಸೂಧನ ಶಾಸ್ತ್ರೀ, ಚುನಾವಣಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ಗುಲ್ಬರ್ಗಾ, ಇವರು ದಿನಾಂಕ: 01–12–2008ಕ್ಕೆ ವೇತನ ಶ್ರೇಣಿ 11400–21600 ವೇತನ ಗರಿಷ್ಠ ಮಟ್ಟಕ್ಕೆ ತಲುಪಿದ್ದು, ಶ್ರೀಯುತರಿಗೆ 01–12–2009 ರಿಂದ ಮೊದಲನೇ ಸ್ಥಗಿತ ವೇತನ ಬಡ್ತಿಯನ್ನು ಮಂಜೂರು ಮಾಡಿ ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಬಿ. ಸಸಾಲಟ್ಟಿ**

ಪಿ.ಆರ್. 308

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ.ಡಿ. ಶಾಮೀದ್, ದ್ವಿತೀಯ ದರ್ಜೆ ಸಹಾಯಕರು, ತಾಲ್ಲೂಕು ಕಛೇರಿ, ಗಂಗಾವತಿ ತಾಲ್ಲೂಕು ಕೊಪ್ಪಳ ಜಿಲ್ಲೆ ಇವರು ಎಸಗಿದ ಭ್ರಷ್ಟಾಚಾರ ಆರೋಪದ ಕುರಿತು ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ :**

1. ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಅ.ಸ.ಪ.ಸಂ.ಕಾಂಪ್ಟ್/ ಉಪಲೋಕ್/ ಜಿಎಲ್‌ಬಿ.625/2003/ಪಿಪಿ, ದಿನಾಂಕ: 16–09–2005.
2. ಗೌರವಾನ್ವಿತ ಉಪ ಲೋಕಾಯುಕ್ತರವರ ಶಿಫಾರಸ್ಸು ವರದಿ ಸಂಖ್ಯೆ:ಕಾಂಪ್ಟ್/ಉಪಲೋಕ್/ ಜಿಎಲ್‌ಬಿ.625/ 2003/ಎಆರ್‌ಎಲ್ ಒ–3/ಪಿಪಿ, ದಿನಾಂಕ: 12–09–05.
3. ಸರ್ಕಾರದ ಆದೇಶ ಸಂಖ್ಯೆ: ಕಂಇ 464 ಎಂವಿಎಸ್ 2005, ಬೆಂಗಳೂರು, ದಿನಾಂಕ: 24–09–2005.
4. ಮಾನ್ಯ ಉಪ ಲೋಕಾಯುಕ್ತರವರ ಪತ್ರ ಸಂಖ್ಯೆ: ಎಲ್‌ಒಕೆ/ಎಆರ್‌ಇ–3/ಇಎನ್‌ಕ್ಯೂ–15/2008–09, ದಿನಾಂಕ: 08–12–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ನಿಬಂಧಕರು, ಕರ್ನಾಟಕ ಲೋಕಾಯುಕ್ತರವರ ವರದಿಯಂತೆ ಶ್ರೀ ಎಂ.ಡಿ. ಶಾಮೀದ್, ದ್ವಿ.ದ.ಸ. ಇವರು ಗಂಗಾವತಿ ತಾಲ್ಲೂಕು ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವಾಗ ಶ್ರೀ ಯಂಕಪ್ಪ ಬಿನ್ ಹುಸೇನಪ್ಪ ಪೂಜಾರ್ ಸಾ: ಲಂಬಿನಹಳ್ಳಿ ತಾಲ್ಲೂಕು, ಗಂಗಾವತಿ ಇವರಿಗೆ ಸಂಬಂಧಿಸಿದ ಜಮೀನು ಸ.ನಂ. 10, ವಿಸ್ತೀರ್ಣ 2–20 ಗುಂಟೆ ಇನಾಂ ಜಮೀನನ್ನು ಅಳತೆ ಮಾಡಿ ಪೋಡಿ ತಿದ್ದುಪಡಿ ಮಾಡಿ ಪಹಣಿಯನ್ನು ನೀಡುವ ಬಗ್ಗೆ ಫಿರ್ಯಾದುದಾರರಾದ ಶ್ರೀ ದೇವರಾಜು ಬಿನ್ ಬಂಗಾರಪ್ಪ ಇವರಿಂದ ಅಕ್ರಮವಾಗಿ ಲಂಚ ಕೇಳಿ ಪಡೆಯುತ್ತಿರುವಾಗ ಲೋಕಾಯುಕ್ತ ಪೊಲೀಸರ ದಾಳಿಗೆ ಸಿಕ್ಕಿಬಿದ್ದ ಪ್ರಯುಕ್ತ ಸದರಿ ನೌಕರರು ಎಸಗಿದ ಈ ದುರ್ನಡತೆ ತನಿಖೆಯಿಂದ ಮೇಲ್ನೋಟಕ್ಕೆ ನಿಜವಿರುವುದಾಗಿ ಕಂಡು ಬಂದಿರುವುದರಿಂದ ಕಠಿಣ ದಂಡನೆ ವಿಧಿಸಲು ಅಳವಡಿಸುವ ವಿಧಿವಿಧಾನಗಳ ಅನ್ವಯ ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡಲು ಹಾಗೂ ಸದರಿ ವಿಚಾರಣೆಯನ್ನು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿಕೊಡುವಂತೆ ಸಂಖ್ಯೆ (2) ರಲ್ಲಿ ಮಾನ್ಯ ಉಪ ಲೋಕಾಯುಕ್ತರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಉಪಲೋಕಾಯುಕ್ತರ ವರದಿಯನ್ನು ಸರ್ಕಾರವು ಪರಿಶೀಲಿಸಿ ಶ್ರೀ ಎಂ.ಡಿ. ಶಾಮೀದ್, ದ್ವಿ.ದ.ಸ. ತಾಲ್ಲೂಕು ಕಛೇರಿ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಸಿಸಿಎ ನಿಯಮಾವಳಿ ನಿಯಮ 11 ಮತ್ತು 11–ಎ ರಡಿಯಲ್ಲಿ ವಿಚಾರಣೆಗೆ ಒಳಪಡಿಸಿ ಸದರಿ ವಿಚಾರಣೆಯನ್ನು ಇದೇ ನಿಯಮಾವಳಿ ನಿಯಮ 14–ಎ ರನ್ವಯ ಮಾನ್ಯ ಲೋಕಾಯುಕ್ತರಿಗೆ ವಹಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಸರ್ಕಾರವು ಆದೇಶಿಸಿತ್ತು.

ಅದರಂತೆ ಕ್ರಮ ಸಂಖ್ಯೆ (4)ರಲ್ಲಿ ಮಾನ್ಯ ಉಪಲೋಕಾಯುಕ್ತರು ವಿಚಾರಣೆ ನಡೆಸಿ ಶ್ರೀ ಎಂ.ಡಿ. ಶಾಮೀದ್, ದ್ವಿ.ದ.ಸ. ತಾಲ್ಲೂಕು ಕಛೇರಿ, ಗಂಗಾವತಿರವರ ಮೇಲಿನ ಆರೋಪವು ಸಾಬೀತಾಗಿಲ್ಲವೆಂದು ವರದಿಯನ್ನು ನೀಡಿರುತ್ತಾರೆ. ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆಪಾದಿತರಾದ ಶ್ರೀ ಎಂ.ಎಸ್. ಶಾಮೀದ್, ದ್ವಿ.ದ.ಸ. ತಾಲ್ಲೂಕು ಕಛೇರಿ, ಗಂಗಾವತಿ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈಬಿಟ್ಟು ಆರೋಪಮುಕ್ತರನ್ನಾಗಿ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 464 ಎಂವಿಎಸ್ 2005 ಬೆಂಗಳೂರು, ದಿನಾಂಕ: 17–01–2011.**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಶ್ರೀ ಎಂ.ಎಸ್. ಶಾಮೀದ್, ದ್ವಿತೀಯ ದರ್ಜೆ ಸಹಾಯಕ, ತಾಲ್ಲೂಕು ಕಛೇರಿ, ಗಂಗಾವತಿ ಇವರ ವಿರುದ್ಧದ ಲೋಕಾಯುಕ್ತ ವಿಚಾರಣೆಯನ್ನು ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಕೈಬಿಟ್ಟು ಆರೋಪ ಮುಕ್ತರನ್ನಾಗಿ ಮಾಡಿ, ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 309

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು ಎ)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಇ. ಬಾಲಕೃಷ್ಣಪ್ಪ, ಹಿಂದಿನ ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರುರವರ ಪತ್ರ ಸಂಖ್ಯೆ: ಸಿಸಿಎ/ಸಿಆರ್/18/10–11, ದಿನಾಂಕ: 15–10–2010.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ: 15–10–2010ರ ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ ರವರ ಪತ್ರದಲ್ಲಿ ಶ್ರೀ ಎಸ್.ಜಿ. ಪ್ರಸನ್ನ, ದ್ವಿ.ದ.ಸ. ಪರಶುರಾಂಪುರ ನಾಡಕಛೇರಿ, ನಿಯೋಜನೆ ಮೇರೆಗೆ ತಾಲ್ಲೂಕು ಕಛೇರಿ, ಚಳ್ಳಕೆರೆ ರವರಿಗೆ ಚಳ್ಳಕೆರೆ ತಾಲ್ಲೂಕಿನಲ್ಲಿರುವ ನವ ಕಾನೂನು ಪದವೀಧರರಿಗೆ ಪ್ರೋತ್ಸಾಹ ಧನ ನೀಡುವ ಶಾಖೆಯನ್ನು ವಹಿಸಲಾಗಿದ್ದು, ಸದರಿ ನೌಕರರು ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು ರವರಿಗೆ ಬಿಡುಗಡೆ ಮಾಡಲಾಗಿದ್ದ ಅನುದಾನದಲ್ಲಿ ಕಾನೂನು ಪದವೀಧರರಿಗೆ ಚೆಕ್ ನೀಡುವ ಬಗ್ಗೆ ತಹಶೀಲ್ದಾರರಿಂದ ಚೆಕ್ಕುಗಳಿಗೆ ಸಹಿ ಪಡೆಯಲಾಗಿದ್ದು, ಅವುಗಳನ್ನು ಸಂಬಂಧಿಸಿದವರಿಗೆ ನೀಡದಿರುವ ವಿಚಾರದಲ್ಲಿ ಸಂಬಂಧಪಟ್ಟ ಬ್ಯಾಂಕಿನಿಂದ ಬ್ಯಾಲೆನ್ಸ್ ಶೀಟ್, ಚೆಕ್ಕುಗಳ ವಿವರಗಳನ್ನು ಪಡೆದು, ಜಿಲ್ಲಾಧಿಕಾರಿಗಳು ಪರಿಶೀಲಿಸಲಾಗಿರುವುದಾಗಿ ದಿನಾಂಕ: 10–08–2009 ರಿಂದ 18–01–2010 ರವರೆಗೆ ವಿವಿಧ ಮೊತ್ತಗಳ ಒಟ್ಟು 29 ಚೆಕ್‌ಗಳನ್ನು ಒಟ್ಟು ಮೊತ್ತ ರೂ. 29,000/– ಕ್ಕೆ ಬರೆದಿದ್ದು, ನಂತರ ನಾಲ್ಕು ಚೆಕ್ಕುಗಳಲ್ಲಿನ ಮೊತ್ತವನ್ನು ತಿದ್ದಿ, ರೂ. 60,000/– ಗಳ ಹೆಚ್ಚಿಗೆ ಹಣವನ್ನು ಬ್ಯಾಂಕಿನಿಂದ ಡ್ರಾ ಮಾಡಿರುವುದರ ಜೊತೆಗೆ 14 ಚೆಕ್ಕುಗಳನ್ನು ಫಲಾನುಭವಿಗಳ ಫೋರ್ಜರಿ ಸಹಿ ಮಾಡಿ ಒಟ್ಟು ರೂ. 1,01,000/– ಮೊಬಲಗಿನ ಸರ್ಕಾರದ ಹಣವನ್ನು ದುರುಪಯೋಗ ಮಾಡಿರುವ ಹಿನ್ನೆಲೆಯಲ್ಲಿ ಈ ನೌಕರರ ವಿರುದ್ಧ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಮೊಕದ್ದಮೆ ದಾಖಲಿಸಿ, ನ್ಯಾಯಾಂಗ ಬಂಧನದಲ್ಲಿಟ್ಟಿರುವ ಕಾರಣ ದಿನಾಂಕ: 23–06–2010 ರಿಂದ ಅನ್ವಯವಾಗುವಂತೆ ನೌಕರರನ್ನು ನಿಲಂಬನೆಯಲ್ಲಿ ಇಟ್ಟಿರುವುದಾಗಿ ಜಿಲ್ಲಾಧಿಕಾರಿಗಳು ವರದಿ ನೀಡಿರುತ್ತಾರೆಂದು ತಿಳಿಸಿರುತ್ತಾರೆ.

ಅಲ್ಲದೆ ಜಿಲ್ಲಾಧಿಕಾರಿಗಳು ಈ ವಿಚಾರದಲ್ಲಿ ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು ಇವರಿಗೆ ಕಾರಣ ಕೇಳಿ ನೋಟೀಸ್ ನೀಡಿ ಅವರ ವಿವರಣೆ ಪಡೆದಿರುವುದಾಗಿ, ಸದರಿ ವಿವರಣೆಯಲ್ಲಿ ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್‌ರವರು ಬೇಜವಾಬ್ದಾರಿಯುತ ಹಾರಿಕೆ ಉತ್ತರವನ್ನು ಸಲ್ಲಿಸಿರುವುದಾಗಿ, ನೌಕರರ ಮೇಲೆ ನಂಬಿಕೆಯಿಂದ ಚೆಕ್‌ಗಳಿಗೆ ಸಹಿ ಮಾಡಿರುವುದಾಗಿ ತಮ್ಮ ಕಾರ್ಯ ಒತ್ತಡದಿಂದ ನೌಕರನ ತಪ್ಪನ್ನು ಗಮನಿಸಲಾಗಿರುವುದಿಲ್ಲವೆಂದು ನೀಡಿರುವ ವಿವರಣೆ ಸಮಂಜಸವಲ್ಲವೆಂದು ಜಿಲ್ಲಾಧಿಕಾರಿಗಳು ತಮ್ಮ ಪತ್ರದಲ್ಲಿ ತಿಳಿಸುತ್ತಾ, ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್‌ರವರು ಕೆಲವೊಂದು ಗುರುತರವಾದ ಕರ್ತವ್ಯ ಲೋಪ ಎಸಗಿರುವುದಾಗಿ ತಿಳಿಸಿರುತ್ತಾರೆ.

ಜಿಲ್ಲಾಧಿಕಾರಿಗಳು ಸದರಿ ಪತ್ರದಲ್ಲಿ ತಿಳಿಸಿರುವಂತೆ ತಹಶೀಲ್ದಾರ್ ರವರು ಪ್ರಮುಖವಾದ ಈ ಶಾಖೆಯನ್ನು ಶ್ರೀ ಎಸ್.ಜಿ. ಪ್ರಸನ್ನ, ದ್ವಿ.ದ.ಸ. ರವರಿಗೆ ನಿರ್ವಹಿಸಲು ನೀಡಿದ್ದು, ಸದರಿ ನೌಕರರು ಅವರ ದುಷ್ಕೃತ್ಯಗಳಿಂದಾಗಿ ಈ ಹಿಂದೆ ಅಮಾನತ್ತುಗೊಂಡು ಇಲಾಖಾ ವಿಚಾರಣೆ ಎದುರಿಸುತ್ತಿರುವವರಾಗಿದ್ದು, ಇಂತಹವರಿಗೆ ಹಣಕಾಸು ವ್ಯವಹಾರದ ಜವಾಬ್ದಾರಿಯನ್ನು ತಹಶೀಲ್ದಾರ್‌ರವರು ವಹಿಸಿರುವುದಾಗಿ, ಪ್ರೋತ್ಸಾಹಧನ ಪಾವತಿಸಲು ಚೆಕ್ ಬರೆಯುವ ಮುನ್ನ ಮಂಜೂರಾತಿಯನ್ನು ಕಡತದಲ್ಲಿ ಮಾಡದೇ ಇರುವುದು ಹಾಗೂ ಈ ಬಗ್ಗೆ ಕಡತ ನಿರ್ವಹಿಸದೇ ಇರುವುದು, ಸಂಬಂಧಿಸಿದ ಶಿರಸ್ತೇದಾರ್‌ರವರ ಗಮನಕ್ಕೆ ತರದೆ ವಿಷಯ ನಿರ್ವಾಹಕರು ಚೆಕ್ ಬರೆದು ನೇರವಾಗಿ ತಹಶೀಲ್ದಾರ್‌ರವರ ಸಹಿ ಮಾಡಿಸುತ್ತಿರುವ ಬಗ್ಗೆ ಪ್ರೋತ್ಸಾಹ ಧನ ನೀಡುವ ಚೆಕ್‌ಗಳನ್ನು ಅಕೌಂಟ್ ಪೇಯಿ ಅಥವಾ ಕ್ರಾಸ್ ಮಾಡದೆ ಚೆಕ್ ಸಹಿ ಮಾಡಿರುವ ಬಗ್ಗೆ ಚೆಕ್‌ಗೆ ಸಹಿ ಮಾಡುವ ಮುನ್ನ ಚೆಕ್‌ನಲ್ಲಿ ಅಂಕಿ ಹಾಗೂ ಪದಗಳಲ್ಲಿ ನಮೂದಿಸಿರುವ ಮೊತ್ತ ತಿದ್ದಲು ಆಸ್ಪದ ಇಲ್ಲದಂತೆ ಬರೆದಿರುವುದನ್ನು ಪರಿಶೀಲಿಸದೆ ಸಹಿ ಮಾಡಿರುವುದು, ಚೆಕ್‌ಗಳನ್ನು ಫಲಾನುಭವಿಗಳಿಗೆ ನೀಡಿದ ಬಗ್ಗೆ ದಾಖಲೆ ಪಡೆಯದಿರುವುದು, ಅನುದಾನ ಬಿಡುಗಡೆ ಮತ್ತು ಖರ್ಚು ಮಾಡಿದ ಬಗ್ಗೆ ನಗದು ವಹಿ ನಿರ್ವಹಿಸದೇ ಇರುವ ಮುಂತಾದ ಆರೋಪಗಳನ್ನು ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್‌ರವರ ವಿರುದ್ಧ ಮಾಡಿದ್ದು, ತಹಶೀಲ್ದಾರ್‌ರವರು ಈ ಎಲ್ಲಾ ನ್ಯೂನತೆಗಳಿಗೆ ಗಮನಹರಿಸದೆ ಕರ್ತವ್ಯ ಚ್ಯುತಿ ಎಸಗಿ, ರೂ. 1,01,000/– ಗಳ ಸರ್ಕಾರಿ ಹಣ ದುರುಪಯೋಗಕ್ಕೆ ಕಾರಣರಾಗಿರುವುದರಿಂದ ಅವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳಲು ಕೋರಿರುತ್ತಾರೆ.

ತಹಶೀಲ್ದಾರರು ಒಬ್ಬ ಜವಾಬ್ದಾರಿಯುತ ಅಧಿಕಾರಿಯಾಗಿದ್ದು, ಹಣಕಾಸು ನಿರ್ವಹಣೆಯ ಜವಾಬ್ದಾರಿಯನ್ನು ಸರಿಯಾಗಿ ನಿರ್ವಹಿಸದೆ ಹಣಕಾಸಿನ ವ್ಯವಹಾರದಲ್ಲಿ ಅಗತ್ಯ ಹಾಗೂ ಅವಶ್ಯ ದಾಖಲೆಗಳನ್ನು ನಿರ್ವಹಿಸದೆ ರೂ. 1,01,000/– ಗಳ ಸರ್ಕಾರಿ ಹಣ ದುರುಪಯೋಗಕ್ಕೆ ಕಾರಣವಾಗಿ ಕರ್ತವ್ಯ ಲೋಪ ಎಸಗಿರುವುದು ಮೇಲ್ನೋಟಕ್ಕೆ ಕಂಡುಬರುವುದರಿಂದ ಜಿಲ್ಲಾಧಿಕಾರಿಗಳ ವರದಿ ಪರಿಗಣಿಸಿ, ಶ್ರೀ ಇ. ಬಾಲಕೃಷ್ಣಪ್ಪ, ತಹಶೀಲ್ದಾರ್ ಚಳ್ಳಕೆರೆ ತಾಲ್ಲೂಕುರವರನ್ನು ಇಲಾಖಾ ವಿಚಾರಣೆಗೆ ಒಳಪಡಿಸಿ, ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿರುತ್ತಾರೆ.

ಪ್ರಾದೇಶಿಕ ಆಯುಕ್ತರು, ಬೆಂಗಳೂರು ವಿಭಾಗ, ಬೆಂಗಳೂರು ಹಾಗೂ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ, ಇವರುಗಳ ವರದಿಯನ್ನು ಪರಿಗಣಿಸಿ, ಶ್ರೀ ಇ. ಬಾಲಕೃಷ್ಣಪ್ಪ, ಹಿಂದಿನ ತಹಶೀಲ್ದಾರ್, ಚಳ್ಳಕೆರೆ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಕಲಘಟಗಿ ತಾಲ್ಲೂಕು, ಧಾರವಾಡ ಜಿಲ್ಲೆ, ಇಲ್ಲಿ ಇವರು ಕರ್ತವ್ಯ ಲೋಪವೆಸಗಿ ಕರ್ನಾಟಕ ನಾಗರೀಕ ಸೇವಾ (ನಡವಳಿ) ನಿಯಮಗಳು 1966ರ ನಿಯಮ 3ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದು ಕಂಡುಬಂದಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಸೇವೆಯಿಂದ ಅಮಾನತ್ತುಗೊಳಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಕಂಇ 67 ಎಡಿಇ 2010 ಬೆಂಗಳೂರು, ದಿನಾಂಕ: 10–01–2011.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಡಿ) ಮತ್ತು 10 (3)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಇ. ಬಾಲಕೃಷ್ಣಪ್ಪ, ಹಿಂದಿನ ತಹಶೀಲ್ದಾರ್,

ಚಳ್ಳಕೆರೆ ತಾಲ್ಲೂಕು, ಪ್ರಸ್ತುತ ತಹಶೀಲ್ದಾರ್, ಕಲಘಟಗಿ ತಾಲ್ಲೂಕು ಧಾರವಾಡ ಜಿಲ್ಲೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಮತ್ತು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರ ಅನುಮತಿ ಪಡೆಯದೇ ಕೇಂದ್ರಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 310

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ
(ಸೇವೆಗಳು–3)

## ಮೂಲ ಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಮಂಗಳೂರು ವಿಮಾನ ನಿಲ್ದಾಣದ ಹೊಸ ಟರ್ಮಿನಲ್ ಕಟ್ಟಡಕ್ಕೆ ಹೆಚ್ಚುವರಿ ಸಂಪರ್ಕ ರಸ್ತೆಯನ್ನು ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ :**
1. ಜಿಲ್ಲಾಧಿಕಾರಿ, ದಕ್ಷಿಣ ಕನ್ನಡ, ಮಂಗಳೂರು ಇವರ ಪತ್ರ ಸಂಖ್ಯೆ: ಎಲ್ಎಕ್ಯೂ.ಎಂ.ಎಸ್. ಸಿ.ಸ.ಆರ್.213/09–10(ಬಿ.1) ದಿನಾಂಕ: 31–10–2009.
2. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್, ಮಂಗಳೂರು ಇವರ ದಿನಾಂಕ: 22–12–2010ರ ಪತ್ರ ಸಂಖ್ಯೆ: ಅ.ಸ.ಪ.ಸಂ. ದಜಿ ಪಂ ಮುಕಾಅ/9/2010–11.

**ಪ್ರಸ್ತಾವನೆ:**

ಕ್ರ.ಸಂ. (1)ರಲ್ಲಿ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು, ಬಜ್ಪೆ ಕೆಂಜಾರು ಬಳಿ ಹೊಸ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಕಾರ್ಯಾರಂಭವಾಗಲಿದ್ದು ವಿಮಾನ ನಿಲ್ದಾಣದಲ್ಲಿ ಸಂಚರಿಸುವ ಪ್ರಯಾಣಿಕ ವಾಹನಗಳ ಸಂಖ್ಯೆ ಅಧಿಕವಾಗುವುದರಿಂದ, ಎರಡು ಸಂಪರ್ಕ ರಸ್ತೆಗಳ ಅಗತ್ಯತೆಯ ಬಗ್ಗೆ ವಿಮಾನ ನಿಲ್ದಾಣಗಳ ಪ್ರಾಧಿಕಾರದವರು ಮನವಿ ಮಾಡಿಕೊಂಡಿರುವುದಾಗಿ ತಿಳಿಸಿ, ಅದರಂತೆ ಹೊಸ ಟರ್ಮಿನಲ್ ಕಟ್ಟಡಕ್ಕೆ ಸಂಪರ್ಕ ರಸ್ತೆ ನಿರ್ಮಾಣದ ಬಗ್ಗೆ ಯೋಜನೆಯನ್ನು ತಾಂತ್ರಿಕ ಸಲಹೆ ಮೇರೆಗೆ ರೂ. 760.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಿ, ಅನುಮೋದನೆ ಹಾಗೂ ಅನುದಾನ ಬಿಡುಗಡೆ ಮಾಡುವಂತೆ, ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕೆಂಜಾರುನಿಂದ ವಿಮಾನ ನಿಲ್ದಾಣದ ಹೊಸ ಟರ್ಮಿನಲ್ ಕಟ್ಟಡದವರೆಗೆ ಸುಮಾರು 1,000 ಮೀಟರ್ ಉದ್ದದ ಚತುಷ್ಪಥ ರಸ್ತೆ ಕಾಮಗಾರಿಯ ರೂ. 7.6 ಕೋಟಿ ಅಂದಾಜು ವೆಚ್ಚ ಪ್ರಸ್ತಾವನೆಗೆ ಸರ್ಕಾರ ಅನುಮೋದನೆ ನೀಡಿ ಈ ಕಾಮಗಾರಿಯನ್ನು ಕೆಆರ್‌ಡಿಸಿಎಲ್‌ಗೆ ವಹಿಸಲು ಸರ್ಕಾರ ನಿರ್ಧರಿಸಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 114 ರಾರಾವಿ 2009 ಬೆಂಗಳೂರು, ದಿನಾಂಕ: 25–01–2011.**

ಕೆಂಜಾರುವಿನಿಂದ ಮಂಗಳೂರು ವಿಮಾನ ನಿಲ್ದಾಣದ ಹೊಸ ಟರ್ಮಿನಲ್ ಕಟ್ಟಡಕ್ಕೆ ಚತುಷ್ಪಥ (ಸುಮಾರು 1,000 ಮೀ. ರಸ್ತೆಯನ್ನು ಡೆಕ್ಕನ್ ಪಾರ್ಕ್ ಹೋಟೆಲ್ ಪಕ್ಕದಿಂದ ನಿರ್ಮಿಸುವ ಕಾಮಗಾರಿಯನ್ನು ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ ಜಿಲ್ಲೆ ಇವರು ಅಂದಾಜಿಸಿರುವ ಮೊತ್ತ ರೂ. 7.60 (ರೂ. ಏಳು ಕೋಟಿ ಅರವತ್ತು ಲಕ್ಷಗಳು) ಕೋಟಿಗಳಿಗೆ ಅನುಮೋದಿಸಿ ಜಿಲ್ಲಾ ಪಂಚಾಯತ್ ಸಹಮತಿಯೊಂದಿಗೆ ಕೆಆರ್‌ಡಿಸಿಎಲ್ ಗೆ ವಹಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2. ಈ ಮೊತ್ತವನ್ನು ವ್ಯವಸ್ಥಾಪಕ ನಿರ್ದೇಶಕರು, ಕೆಆರ್‌ಡಿಸಿಎಲ್ ಇವರು ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ಕರ್ನಾಟಕ ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿ ತೆಗೆಯಲು ಅನುಮತಿ ನೀಡಲಾಗಿದೆ.

3. ಈ ಮೊತ್ತವನ್ನು 2010–11ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 5465–01–190–2–05 ಪರ್ಯಾಯ ರಸ್ತೆಗಳು–ಬಂಡವಾಳ ಹೂಡಿಕೆ (ಯೋಜನೆ)ಯಡಿ ಒದಗಿಸಿರುವ ರೂ. 1,500.00 ಲಕ್ಷಗಳ ಅನುದಾನದಲ್ಲಿ ಭರಿಸುವುದು.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1188 ವೆಚ್ಚ–1/2010 ದಿನಾಂಕ: 08–07–2010 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿ.ಎ. ಬಾಬುರವೀಂದ್ರನಾಥ್ ಪಟೇಲ್**
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 311